# ಮಹೇಂದ್ರ ಮೋಕ್ಷ

ಐವತ್ತು ಕಥಾ ಚಿತ್ರಪಟಗಳು ಮತ್ತು ಆಖ್ಯಾಯಿಕೆ

ಸಂಪಾದಕರು : ಡಾ|| ಜಿ. ಜ್ಞಾನಾನಂದ





# ಮಹೇಂದ್ರ ಮೋಕ್ಷ

## (ಐವತ್ತು ಕಥಾ ಚಿತ್ರಪಟಗಳು ಮತ್ತು ಆಖ್ಯಾಯಿಕೆ)

ಸಂಪಾದಕರು :

ಡಾ|| ಜಿ. ಜ್ಞಾನಾನಂದ ಬಿ.ಎಸ್ಸಿ., ಎಂ.ಎ., ಡಿ.ಲಿಟ್.




ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು – ೧

**ಮಹೇಂದ್ರ ಮೋಕ್ಷ**

(ತಗಡಿನಲ್ಲಿ ಭಾಗವತದ ಆಖ್ಯಾಯಿಕೆಯ 50 ಉಬ್ಬು ಚಿತ್ರಶಿಲ್ಪ ಫಲಕಗಳು)

ಚಿತ್ರ-ಕಥೆ – ಅಂತರಾರ್ಥ ಲೇಖಕರು : **ಶ್ರೀಮತಿ ಸರಿತಾ ಜ್ಞಾನಾನಂದ**

ಸಂಪಾದಕರು : **ಡಾ|| ಜಿ. ಜ್ಞಾನಾನಂದ**

ಪ್ರಕಾಶಕರು : **ಶ್ರೀ ತ್ಯಾಗರಾಜ್,** ರಿಜಿಸ್ಟ್ರಾರ್, ಶಿಲ್ಪಕಲಾ ಅಕಾಡೆಮಿ, ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು – 560 001

ಪುಟಗಳು : 88 Price : Rs. 90/-



ಛಾಯಚಿತ್ರಗಳು : ಸಿ. **ವೆಂಕಟೇಶ್,** ಬೆಂಗಳೂರು

ಮುದ್ರಣ : **ವಿಶ್ವಾಸ್ ಪ್ರಿಂಟ್ಸ್,** ಚಾಮರಾಜಪೇಟೆ, ಬೆಂಗಳೂರು – 18

**MAHENDRA MOKSHA**

(50 high relief sheetmetal panels depicting a story from Bhagavata Purana).

Narration : **Smt. Saritha Gnanananda**

Editor : **Dr. G. Gnanananda**

*Publisher*

**Sri Thyagaraj,** Registrar, Karnataka Shilpakala Academy
Kannada Bhavan, J.C. Road, Bangalore - 1

Pages : 88 Price : Rs. 90/-



Photos : **C. Venkatesh,** Bangalore

*Printed at*

ವಿಶ್ವಾಸ್ ಪ್ರಿಂಟ್ಸ್
VISHWAS PRINTS
29/1, 3ನೇ ಅಡ್ಡರಸ್ತೆ, ನಂಜಾಂಬ ಅಗ್ರಹಾರ
ಚಾಮರಾಜಪೇಟೆ, ಬೆಂಗಳೂರು - 18
ದೂರವಾಣಿ : 26604835

# 1 ಅಧ್ಯಕ್ಷರ ಮಾತು

ಹಿತ್ತಾಳೆ ಮತ್ತು ತಾಮ್ರದ ತಗಡಿನಲ್ಲಿ ಉಬ್ಬು ಕೆತ್ತನೆ ಮಾಡಿ ದೇವತಾಮೂರ್ತಿ, ಗರ್ಭಗುಡಿಯ ಬಾಗಿಲು, ಗೋಡೆ ಮತ್ತು ಇತರ ಭಾಗಗಳನ್ನು ಅಲಂಕರಿಸುವುದು ದೇವಾಲಯ ಶಿಲ್ಪದಲ್ಲಿ ಬಹು ಹಿಂದಿನ ಕಾಲದಿಂದ ಬಂದಿರುವ ಸಾಂಪ್ರದಾಯ. ದೇವಾಲಯದ ಸೂರು, ವಿಮಾನಗಳನ್ನೂ ಅಲಂಕರಿಸಿದ ತಗಡಿನಿಂದ ಸಿಂಗರಿಸುವುದುಂಟು. ಈ ರೀತಿಯ ಅಲಂಕರಣ ಕೇರಳ ಮತ್ತು ತಮಿಳು ನಾಡಿನ ದೇವಾಲಯಗಳಲ್ಲಿ ವಿಪರೀತವಾಗಿರುತ್ತದೆ. ಕರ್ನಾಟಕದ ದೇವಾಲಯಗಳಲ್ಲೂ ಇದು ವ್ಯಾಪಕವಾಗಿ ವೃದ್ಧಿಗೊಂಡಿದೆ. ಪ್ರಾಚೀನ ದೇವಾಲಯಗಳಲ್ಲಿ ಕಥಾ ಚಿತ್ರಗಳು ಇರುವಂತೆಯೇ ಅರಮನೆಗಳಲ್ಲಿ ಕಥಾಚಿತ್ರಪಟಗಳು ಇರುತ್ತಿದ್ದವು. ಆದರೆ ಆ ಕಲೆಯು ಕೇವಲ ಮರದ ಕೆತ್ತನೆಗಳ ಮೇಲ್ಮುಸುಕಾಗಿ ಈ ತಗಡುಗಳ ಬಳಕೆ ಇದೆ. ಈ ಕಾರಣದಿಂದಾಗಿ ಪ್ರಸ್ತುತ ಶಿಲ್ಪಗಳ ಕೆಲಸ ಕೇವಲ ಬಳ್ಳಿ, ಹೂಗಳ ಅಲಂಕಾರ, ಕೀರ್ತಿ ಮುಖ – ಮಕರ – ಹಂಸಗಳ ವಿನ್ಯಾಸಗಳಿಗೆ ಮಾತ್ರವೇ ಸೀಮಿತಗೊಂಡಿದೆ. ಈ ಕಾರಣದಿಂದ ಉಬ್ಬುಕೆತ್ತನೆಯ ಶಿಲ್ಪಿಗಳ ಸಾಮರ್ಥ್ಯ ಕಾಲದಿಂದ ಕಾಲಕ್ಕೆ ಇಳಿಮುಖವಾಗಿ ಸಾಗುತ್ತಿದೆ.

ಉಬ್ಬು ಕೆತ್ತನೆಯ ಸಂದರ್ಭದಲ್ಲಿ ತಗಡಿನ ಮೇಲೆ ಚಿತ್ರವನ್ನು ರೇಖಿಸಿಕೊಂಡು ಉಬ್ಬು ಮಾಡಿದ ಕೂಡಲೇ ತಗಡು ವಿಕಸಿಸಿ ಚಿತ್ರದ ರೂಪವನ್ನು ಹದಗೆಡಿಸುತ್ತದೆ. ಈ ರೀತಿಯ ತೊಂದರೆ ಕಲ್ಲು ಮತ್ತು ಮರಶಿಲ್ಪಿಗಳಿಗೆ ಒದಗುವುದಿಲ್ಲ. ಇದರಿಂದ ಚಿತ್ರದ ಮೂಲರೂಪವನ್ನು ಹಿಡಿದಿರಿಸುವ ಸಾಮರ್ಥ್ಯ ಶಿಲ್ಪಿಯಾದವನು ಗ್ರಹಿಸಿ ರೂಢಿಸಬೇಕಾಗಿರುವ ಅನಿವಾರ್ಯತೆ ಇರುತ್ತದೆ. ಈ ವಿಭಾಗವೇ ರೂಢಿಯಲ್ಲಿರದೆ ಇರುವಾಗ ಈ ವಿಭಾಗಕ್ಕೆ ಪ್ರೋತ್ಸಾಹ ಅತ್ಯಗತ್ಯವಾಗುತ್ತದೆ.

ಈ ಕಾರಣದಿಂದಾಗಿ ಕರ್ನಾಟಕದ ಬೇರೆ ಬೇರೆ ಭಾಗಗಳಿಂದ ಉಬ್ಬುಕೆತ್ತನೆ ಮಾಡುವ ಶಿಲ್ಪಿಗಳನ್ನು ಆಹ್ವಾನಿಸಿ ಅವರಿಂದ ಕೆಲವು ಚಿತ್ರ ಕಥಾ ಪಟಗಳನ್ನು ತಯಾರಿಸುವ ಪ್ರಯೋಗವನ್ನು ಈ ವರ್ಷದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ನಡೆಸಿತು. ಚಿತ್ರಕಥೆಯಾಗಿ ಶ್ರೀಮದ್ಭಾಗವತದ ಆರನೆಯ ಸ್ಕಂದದಲ್ಲಿ ವಿವರಿತವಾಗಿರುವ **ಮಹೇಂದ್ರ ಮೋಕ್ಷ** ಆಯ್ಕೆ ಮಾಡಿಕೊಳ್ಳಲಾಯಿತು. ಇದನ್ನು ಚಿತ್ರಪಟಗಳಿಗೆ ಅನುವಾಗುವಂತೆ ಶ್ರೀಮತಿ ಸರಿತಾಜ್ಞಾನಾನಂದ ಅವರು ಸಾಹಿತ್ಯವನ್ನು ಮೊದಲು ಸಿದ್ಧಪಡಿಸಿಕೊಟ್ಟರು. ಇದಕ್ಕೆ ಮೊದಲೇ 'ಮಹೇಂದ್ರ ಮೋಕ್ಷ'ದ ಪೂರ್ಣವಿವರ ಉಳ್ಳ ಲೇಖನವನ್ನೂ ಸಿದ್ಧಪಡಿಸಿಕೊಟ್ಟಿದ್ದಾರೆ. ಈ ಕೆಲಸವನ್ನು ಶಿಲ್ಪಕಲಾ ಅಕಾಡೆಮಿಯ ಮೇಲಣ ಅಭಿಮಾನದಿಂದ ಉಚಿತವಾಗಿ ಮಾಡಿ ಕೊಟ್ಟಿರುವುದಕ್ಕಾಗಿ ಅಕಾಡೆಮಿಯ ಪರವಾಗಿ ಅವರಿಗೆ ಕೃತಜ್ಞತೆಗಳು. ಈ ಸಾಹಿತ್ಯಕ್ಕೆ ಸೂಕ್ತವಾದ ರೇಖಾ ಚಿತ್ರಗಳನ್ನು ಸಜ್ಜುಗೊಳಿಸಿಕೊಟ್ಟಿರುವವರು ಮಣಿಪಾಲದ ಶ್ರೀ ಪಿ. ಎನ್. ಆಚಾರ್ಯ ಅವರು.

ನಂತರ ಒಂದು ತಿಂಗಳ ಅವಧಿಯಲ್ಲಿ ಹದಿನೆಂಟು ಮಂದಿ ಉಬ್ಬುಕೆತ್ತನೆಯ ಶಿಲ್ಪಿಗಳು ಪ್ರಸ್ತುತ ಚಿತ್ರಪಟಗಳನ್ನು ಶಿಲ್ಪಿ ಶ್ರೀ ವಿ. ಸೋಮಶೇಖರ್ (ಬಿಡದಿ) ಅವರ ನೇತೃತ್ವದಲ್ಲಿ ಸಿದ್ಧಪಡಿಸಿದ್ದಾರೆ.

ಉಬ್ಬುಕೆತ್ತನೆಯಲ್ಲಿ ಸಾಧಾರಣವಾಗಿ ಮುರ್ತಿಗಳನ್ನು ಕೆತ್ತುವುದಿಲ್ಲ. ಇದರೊಂದಿಗೆ ಕೇವಲ ನಕಾಸೆಯೇ ಉಬ್ಬುಕೆತ್ತನೆಯ ಶಿಲ್ಪ ಎಂದು ಭಾವಿಸಿರುವವರೇ ಕರ್ನಾಟಕದ ಆದ್ಯಂತ ಇದ್ದಾರೆ. ಈ ಕ್ಷೇತ್ರವನ್ನು ಶಿಲ್ಪಶಿಕ್ಷಣದಲ್ಲಿ ಒಳಪಡಿಸಿ ಕರ್ನಾಟಕದ ಹಿಂದಿನ ತಲೆಮಾರಿನ ಉಬ್ಬುಕೆತ್ತನೆಯ ಶಿಲ್ಪಿಗಳು ಪಡೆದಿದ್ದ ನಯ – ನಾಜೂಕು – ಸೂಕ್ಷ್ಮತೆಗಳನ್ನು ಈಗಿನ ಪರಂಪರೆಯವರಿಗೆ ರೂಡೀಸಿಕೊಡಬೇಕಗಿರುವ ಅವಶ್ಯಕತೆ ಸ್ಪಷ್ಟವಾಗಿ ಕಾಣಿಸಿದೆ. ಈ ಸಂಬಂಧದಲ್ಲಿ ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಸೂಕ್ತ ಕ್ರಿಯಾ ಯೋಜನೆಯನ್ನು ರೂಪಿಸಬೇಕಾಗಿದೆ.

ಪ್ರಯತ್ನ ಮೊದಲಿನದಾದರೂ ಹಲವು ಚಿತ್ರಗಳು ಚೊಕ್ಕವಾಗಿ ಮೂಡಿಬಂದಿವೆ. ಶಿಲ್ಪಗಳಿಗೆ ಸ್ವಲ್ಪ ಹೆಚ್ಚಿನ ಮಟ್ಟದ ತರಬೇತಿ ಲಭಿಸಿದರೆ ಇನ್ನೂ ಉತ್ತಮ ಚಿತ್ರಪಟಗಳನ್ನು ಮಾಡಬಲ್ಲರು ಎಂಬ ನಂಬಿಕೆ ಮೂಡಿಸುತ್ತದೆ. ಈ ವಿಭಾಗವು ಅಕಾಡೆಮಿಯ ಪೋಷಣೆಗೆ ಒಳಗಾಗಿ ಪ್ರಸ್ಫುಟಿತಗೊಳ್ಳಬೇಕಾಗ ಅವಶ್ಯಕತೆಯು ಬಹುವಾಗಿದೆ.

ಈ ಎಲ್ಲಾ ಚಿತ್ರಪಟಗಳನ್ನು 2011ನೆಯ ವಾರ್ಷಿಕ ಶಿಲ್ಪಕಲಾ ಪ್ರದರ್ಶನದೊಂದಿಗೆ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಲಾಗುತ್ತಿದೆ. ಈ ಕಾರ್ಯಕ್ರಮ ಸಾಧ್ಯವಾಗುವಂತೆ ಸಹಕಾರ ನೀಡುತ್ತಿರುವ ರವೀಂದ್ರ ಕಲಾಕ್ಷೇತ್ರದ ಅಧಿಕಾರಿಗಳಿಗೆ ವಂದನೆಗಳು.

ಈ ಶಿಬಿರ ಹಾಗೂ ಪ್ರದರ್ಶನ ಏರ್ಪಾಟಗಳನ್ನು ಸಹಕರಿಸಿರುವ ರಿಜಿಸ್ಟ್ರಾರ್ ಶ್ರೀ ತ್ಯಾಗರಾಜು, ಹಾಗೂ ಸರ್ವಸದಸ್ಯರಿಗೂ ವಂದನೆಗಳು.

**ಕರ್ನಾಟಕ ಶಿಲ್ಪಕಲಾ ಅಕಾಡೆಮಿ**
**ಕನ್ನಡ ಭವ, ಜೆ.ಸಿ.ರಸ್ತೆ, ಬೆಂಗಳೂರು**

**ಡಾ. ಜಿ. ಜ್ಞಾನಾನಂದ**
ಅಧ್ಯಕ್ಷರು

# 2 ಅಂತರಂಗ




# ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಕನ್ನಡ ಭವನ, ಮೊದಲನೇ ಮಹಡಿ, ಚಾಲುಕ್ಯ ವಿಭಾಗ, ಜೆ.ಸಿ.ರಸ್ತೆ, ಬೆಂಗಳೂರು – 560002




# ಮಹೇಂದ್ರ ಮೋಕ್ಷ

(ಚಿತ್ರಪಟ ಕಥಾಮಾಲೆ)

ಆಕರಗಳು: ಋಗ್ವೇದ ಸಂಹಿತೆ, ತೈತ್ತಿರೀಯ ಸಂಹಿತೆ, ಬೃಹದಾರಣ್ಯಕೋಪನಿಷತ್ತು, ಶ್ರೀಮದ್ಭಾಗವತ ಪುರಾಣ, ಬ್ರಹ್ಮ ಪುರಾಣ, ಬ್ರಹ್ಮಾಂಡ ಪುರಾಣ,

ಚಿತ್ರಕಥೆ
ಶ್ರೀಮತಿ ಸರಿತಾ ಜ್ಞಾನಾನಂದ, ಬೆಂಗಳೂರು

ರೇಖಾಚಿತ್ರ ಕಲ್ಪನೆ
ಶ್ರೀ ಪಿ.ಎನ್.ಆಚಾರ್ಯ, ಮಣಿಪಾಲ

ಶಿಲ್ಪಗುರುಗಳು
ಶಿಲ್ಪಿ ಶ್ರೀ ಬಿ.ಸೋಮಶೇಖರ್, ಜಡದಿ

ಚಿತ್ರಪಟ ಶಿಲ್ಪಿಗಳು:
ಶ್ರೀ ಜಿ.ಬೋರಯ್ಯ, ಬುದನಜ್ಜಿ
ಶ್ರೀ ಎಂ.ಶರಣ್, ರಾಮನಗರ
ಶ್ರೀ ಆರ್.ವಿಶ್ವನಾಥ, ಮುಟಿ.ಜಿರೆಡ್ಡಿಹಳ್ಳಿ
ಶ್ರೀ ಸಿ.ನಾಗೇಶ್, ರಾಮನಗರ
ಶ್ರೀ ಕೆ.ಜಕಣಚಾರ್, ಸೋಗಿ
ಶ್ರೀ ಪವನ ಚಿದಾನಂದ ಪತ್ತಾರ, ಜಮಖಂಡಿ
ಶ್ರೀ ಸೂರಜ್ ನಾಯಕ್, ಮಾಳ
ಶ್ರೀ ಕಮ್ಮಾರ ಷಣ್ಮುಖಪ್ಪ, ಸೋಗಿ
ಶ್ರೀ ನವೀನ್.ಕೆ.ಪೋತದಾರ, ರೋಣ
ಶ್ರೀ ಆರ್.ಮೌನಾಚಾರ್, ಹಾಲೇಕಲ್ಲು
ಶ್ರೀ ಎಂ.ಎಸ್.ಗುರುಪ್ರಸಾದ್, ಬೆಂಗಳೂರು
ಶ್ರೀ ಮೌನೇಶ್ವರ ನಾಗಲಿಂಗ ಪತ್ತಾರ, ಬೆಳಗಾವಿ
ಶ್ರೀ ಷಣ್ಮುಖಪ್ಪ ಜಿ.ಜೂಜ್‌ಗಾಂವ್, ಕುಸನೂರು
ಶ್ರೀ ಎ.ಮಂಜುನಾಥ, ಮಾಲವಿ
ಶ್ರೀ ಎಂ.ಆರ್.ವೀರಭದ್ರಚಾರ್ಯ, ಬೆಂಗಳೂರು
ಶ್ರೀ ಜಿ.ಎನ್.ಸೋಮಾಚಾರ್, ಕೋಲಾರ
ಶ್ರೀ ಅಹಮದ್.ಐ.ಕನಸಾವಿ, ಇಳಕಲ್ಲು
ಶ್ರೀ ನಾಗೇಂದ್ರ ಕಾಳಪ್ಪ ಹೊಂಗಲ್, ಬೆಳಗಾವಿ
ಶ್ರೀ ಶಶಿಧರ.ಕೆ.ಪತ್ತಾರ, ಬೆಳಗಾವಿ

ನಿರ್ದೇಶನ
ಡಾ||ಜಿ.ಜ್ಞಾನಾನಂದ, ಅಧ್ಯಕ್ಷರು,
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,

ನಿರ್ಮಾಣ
ಶ್ರೀ ತ್ಯಾಗರಾಜ್, ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ,



ಅಕಾಡೆಮಿಯ ಅಧ್ಯಕ್ಷರು ಸದಸ್ಯರು ಮತ್ತು ಸಿಬ್ಬಂದಿ
ಡಾ||ಜಿ.ಜ್ಞಾನಾನಂದ
ಅಧ್ಯಕ್ಷರು

ಶ್ರೀ ತ್ಯಾಗರಾಜ್
ರಿಜಿಸ್ಟ್ರಾರ್

ಸದಸ್ಯರು
ಶ್ರೀಮತಿ ದುರ್ಗಾ.ಸಿ.ಅವರ್ತಿ
ಜಂಟಿ ನಿರ್ದೇಶಕರು (ಕಾರ್ಯಕ್ರಮ)
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಶ್ರೀ ಕೆ.ವೆಂಕಟೇಶ್, ಬೆಂಗಳೂರು
ಶ್ರೀ ಸುಧಾಕರ ಡೋಂಗ್ರೆ, ಕಾರ್ಕಳ
ಶ್ರೀ ಗೌತಮ.ವಿ.ಅಂದಾನಿ, ಗುಲಬರ್ಗಾ
ಶ್ರೀ ವಿಠ್ಠಲರೆಡ್ಡಿ.ಫ.ಚುಳಕಿ, ಮೈಸೂರು
ಶ್ರೀ ಮಹಾಮತೇಶ.ಪಲದಿನ್ನಿ, ಬಿಜಾಪುರ
ಡಾ|| ವಿರೂಪಾಕ್ಷಿ ಪೂಜಾರಳ್ಳಿ, ಹಂಪಿ
ಪ್ರೊ|| ಅ.ಸಿ.ಹಿರೇಮಠ, ರಾಣೆಬೆನ್ನೂರು
ಪ್ರೊ|| ಎಸ್.ಜಿ.ರಂಗನಾಥ್, ದಾವಣಗೆರೆ
ಶಿಲ್ಪಿ ಶ್ರೀ ಎಸ್.ಎನ್.ತ್ಯಾಗರಾಜ ಆಚಾರ್ಯ, ಶಿವಾರಪಟ್ಟಣ
ಶಿಲ್ಪಿ ಶ್ರೀ ಪ್ರಭಾಕರ ಆಚಾರ್ಯ, ಕುಂದಾಪುರ
ಶಿಲ್ಪಿ ಶ್ರೀ ಎ.ಪಿ.ಶ್ರೀಕಂಠಾಚಾರ್ಯ, ಗೊಪ್ಪೇನಹಳ್ಳಿ

ಅರ್ಥ ಸದಸ್ಯರು
ಶ್ರೀ ಮಹಾದೇವಯ್ಯ
ಗೆಜೆಟೆಡ್ ಮ್ಯಾನೇಜರ್
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಸಿಬ್ಬಂದಿ
ಶ್ರೀ ಈಶ್ವರ್.ಕು.ಮಿರ್ಜಿ, ಅಧೀಕ್ಷಕರು
ಶ್ರೀ ಎಚ್.ಮಹೇಂದ್ರ, ಗಣಕಯಂತ್ರ ನಿರ್ವಾಹಕರು

## ಕೃತಜ್ಞತೆಗಳು

ಡಾ|| ಮನುಬಳಿಗಾರ್, ಕ.ಆ.ಸೇ
ಆಯುಕ್ತರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

ಶ್ರೀ ಬಸವರಾಜು, ಭಾ.ಆ.ಸೇ
ಸರ್ಕಾರದ ಕಾರ್ಯದರ್ಶಿಗಳು
ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಇಲಾಖೆ, ಬೆಂಗಳೂರು.



1

ಸೃಷ್ಟಿಯ ಪ್ರಾರಂಭಕ್ಕೆ ಎಲ್ಲಾ ಕಡೆ ಜೀವಜಲವೇ (ಆಪವೇ) ತುಂಬಿತ್ತು. ನಿರಾಕಾರ ನಿರ್ಗುಣನಾದ ಸೃಷ್ಟಿ ಕರ್ತ ಪರಮೇಶ್ವರ ವಿಶ್ವಕರ್ಮನು ಸ್ವಯಂಭೂ. ಎಲ್ಲದರ ಸ್ರಷ್ಟ; ನಿಯಂತ್ರಕ. ಜೀವ ಸಂಕುಲಕ್ಕೆ ಆಧಾರವಾಗಬಹುದಾದ ಭೂಮಿಯು ಜೀವ ಜಲದ ತಳದಲ್ಲಿತ್ತು. ಅದನ್ನು ನೋಡಿ ಗಾಳಿಯಾಗಿ ಜೀವಜಲದ ಒಳ ಹೊಕ್ಕು ವರಾಹದ ರೂಪವನ್ನು ಪಡೆದು, ಭೂಮಿಯನ್ನು ಮೇಲಕ್ಕೆ ತಂದು ಸ್ಥಾಪಿಸಿದನು. ಜಲದಿಂದ ಬೇರ್ಪಟ್ಟಿದ್ದರಿಂದ ಅದಕ್ಕೆ ಪೃಥ್ವೀ ಎಂಬ ಹೆಸರು ಬಂತು.

ಚಿತ್ರಪಟ ಶಿಲ್ಪಿ : ಶ್ರೀ ಎಂ. ಶರತ್, ಸೃಷ್ಟಿ ಶಿಲ್ಪಲೋಕ, ರಾಮನಗರ,
ಮೊಬೈಲ್. 98440 21503



2

ಸ್ವಯಂಭೂ ವಿಶ್ವಕರ್ಮನು ತನ್ನ ಸಂಕಲ್ಪದಿಂದ ಪ್ರಜಾಪತಿಗಳನ್ನು, ಅಷ್ಟ ವಸುಗಳನ್ನು, ಏಕಾದಶ ರುದ್ರರನ್ನು, ದ್ವಾದಶ ಆದಿತ್ಯರನ್ನು ಸೃಷ್ಟಿಸಿ ಅವರ ಮೂಲಕ ದೇವ-ಅಸುರ-ಮಾನವಾದಿ ಸಕಲ ಚರಾಚರಗಳನ್ನು ಸೃಷ್ಟಿ ಮಾಡಿದನು.

ಚಿತ್ರಪಟ ಶಿಲ್ಪಿ : ಶ್ರೀ ಎಂ. [illegible], ಸೃಷ್ಟಿ ಶಿಲ್ಪಲೋಕ, ರಾಮನಗರ.
ಮೊಬೈಲ್ 98448 21503



3

ಸೃಷ್ಟಿಕರ್ತನ ಮಾನಸ ಪುತ್ರರಾದ ಪ್ರಜಾಪತಿಗಳಲ್ಲಿ ತ್ವಷ್ಟ ಬ್ರಹ್ಮನೂ ಒಬ್ಬ. ಈತನಿಗೆ ನಾಲ್ಕು ತಲೆಗಳು. ಸಕಲ ರೂಪಗಳ ಸ್ರಷ್ಟ ಈತನೇ. ಈತನ ಹೆಂಡತಿ ರಚನಾ. ಇವರು ಕೃತಯುಗದ ಆದಿಯಲ್ಲಿದ್ದವರು. ಇವರಿಗೆ ಸಂಜ್ಞಾ ಎಂಬ ಹೆಣ್ಣು, ವಿಶ್ವರೂಪಾಚಾರ್ಯ ಮತ್ತು ವಿಶ್ವಕರ್ಮ ಎಂಬ ಇಬ್ಬರು ಗಂಡು ಮಕ್ಕಳು. ವಿಶ್ವರೂಪಾಚಾರ್ಯರಿಗೆ ಮೂರು ತಲೆಗಳು. ಆದ್ದರಿಂದ ತ್ರಿಶಿರಸ್ ಎಂಬ ಹೆಸರೂ ಇತ್ತು.

ಚಿತ್ರಪಟ ಶಿಲ್ಪಿ : ಶ್ರೀ ಟಿ. ದೊರಯ್ಯ, [illegible] (ಚಿತ್ರದುರ್ಗ ಜಿಲ್ಲೆ)
ಮೊಬೈಲ್ : 98455 11095



4

ಸೃಷ್ಟಿ ಕಾರ್ಯಗಳಿಗಾಗಿ ನಿಯೋಜಿತರಾದ ಪ್ರಮುಖ ಬ್ರಹ್ಮರಲ್ಲಿ ಕಶ್ಯಪ ಬ್ರಹ್ಮನೂ ಒಬ್ಬ. ಈತನಿಗೆ ಇಬ್ಬರು ಹೆಂಡತಿಯರು. ಈತನ ಸಂತಾನವೂ ದೇವ–ದಾನವಾದಿಗಳೂ ಸೇರಿ ಬಹು ವ್ಯಾಪಕವಾಗಿತ್ತು. ಅವರ ಮಕ್ಕಳಲ್ಲಿ ಹನ್ನೆರಡು ಮಂದಿ ಆದಿತ್ಯರೂ ಇದ್ದರು. ಹನ್ನೆರಡು ತಿಂಗಳುಗಳ ಅಧಿಪತಿಗಳಾಗಿ ಆರಾಧಿತವಾಗುವ ಆದಿತ್ಯರು ಇವರೇ. ಚಿತ್ರಾ ನಕ್ಷತ್ರಾಧಿಪತಿ ತ್ವಷ್ಟ ವಿಶ್ವಕರ್ಮನು. ಈತನು ಒಬ್ಬ ಆದಿತ್ಯ ಒಂದೇ ಮುಖ ಎರಡು ತೋಳುಗಳು ಇರುವವನು. ಜ್ಯೇಷ್ಠ ಮಾಸಾಧಿಪತಿಯಾದ ವಿವಸ್ವನ್ ಆದಿತ್ಯನೂ ದ್ವಾದಶ ಆದಿತ್ಯರಲ್ಲಿ ಒಬ್ಬ. ಸೂರ್ಯೋಪಾಸಕರು ಮಾಸದ ಅನುಸಾರವಾಗಿ ಈ ದ್ವಾದಶ ಆದಿತ್ಯರ ಪೂಜೆ ಪ್ರತಗಳನ್ನು ನಿಷ್ಠೆಯಿಂದ ಈಗಲೂ ಆಚರಿಸುತ್ತಾರೆ.

ಮೊಬೈಲ್ 95357 04801



5

ವಿವಸ್ವನ್‌ಗೆ ಸಂಜ್ಞಾದೇವಿಯನ್ನು ಪತ್ನಿಯನ್ನಾಗಿ ತಂದುಕೊಳ್ಳಬೇಕೆಂದು ಕಶ್ಯಪ ಬ್ರಹ್ಮನು ಯೋಚಿಸಿದ. ಈ ಬಗ್ಗೆ ತ್ವಷ್ಟ ಬ್ರಹ್ಮನೊಂದಿಗೆ ಸಮಾಲೋಚನೆಯನ್ನು ಮಾಡಿದ. ಮಕ್ಕಳೂ ಹಿರಿಯರ ಮಾತಿಗೆ ಸಮ್ಮತಿಸಿದರು. ಸಂಜ್ಞಾದೇವಿ ಮತ್ತು ವಿವಸ್ವನ್ ಆದಿತ್ಯರ ಮದುವೆಯು ಬಹು ವಿಜೃಂಭಣೆಯಿಂದ ನಡೆಯಿತು. ಕಶ್ಯಪ ಮತ್ತು ತ್ವಷ್ಟೃ ಇಬ್ಬರೂ ಬಹು ಪ್ರಖ್ಯಾತರಾಗಿದ್ದುದರಿಂದ ಆ ಮದುವೆಗೆ ಎಲ್ಲಾ ಪ್ರಮುಖರೂ ಬಂದಿದ್ದರು.

ಚಿತ್ರಪಟ ಶಿಲ್ಪಿ : ಶ್ರೀ ಸೂರಜ್ ನಾಯಕ್, ಮಾಳಗ್ರಾಮ, ಕಾರ್ಕಳ ತಾ॥
ಮೊಬೈಲ್ : 99645 82626



ಸಂಜ್ಞಾದೇವಿ ಮತ್ತು ವಿವಸ್ವನ್ ಅವರ ದಾಂಪತ್ಯ ಸುಖವಾಗಿತ್ತು. ಆದರೆ ಸಂಜ್ಞಾದೇವಿಯ [illegible] ಸಲು ಅಸಾಧ್ಯವಾಗಿದ್ದದ್ದು ಆದಿತ್ಯನ ತೇಜಸ್ಸು. ಗಂಡನು ಸನಿಹಕ್ಕೆ ಬಂದರೆ ಅಸಹನೀಯವಾದ ತಾಪ. ಕ್ರಮ ತಪ್ಪಿಸದೇ ದುಡಿಯುವ ತನ್ನ ಗಂಡನ ಆರೈಕೆಯಲ್ಲಿ ತನಗು [illegible] ದ್ದ ತೊಂದರೆಯನ್ನು ಮರೆಯಲು ಸಂಜ್ಞಾದೇವಿ ಪ್ರಯತ್ನಿಸಿದಳು. ಕಾಲಾನುಕ್ರಮದಲ್ಲಿ ಯಮ ವೈವಸ್ವತ ಮತ್ತು ಮನು ವೈವಸ್ವತ ಎಂಬ ಇಬ್ಬರು ಮಕ್ಕಳು ಮತ್ತು ಯ [illegible] ಎಂಬ ಮಗಳು ಜನಿಸಿದರು. ವಿವಸ್ವನ್ ತೇಜಸ್ಸು ಮಾತ್ರ ಕಾಲದೊಂದಿಗೆ ವರ್ಧಿಸುತ್ತಾ ಹೆಚ್ಚು ಹೆಚ್ಚು ಅಸಹನೀಯವಾಗಿತ್ತಿತ್ತು. ತಂದೆಯಿಂದ ಈ ಸಮಸ್ಯೆಗೆ ಪ [illegible] ಕೊಳ್ಳಬೇಕೆಂಬುದು ಸಂಜ್ಞಾದೇವಿಯ ಆಸೆ.



7

ವಿವಸ್ವನ್‌ನ ಕರ್ತವ್ಯ ನಿತ್ಯ ನಿರಂತರವಾದದ್ದು. ಇನ್ನು ಬಿಡುವು ದೊರೆಯುವುದು ಹೇಗೆ? ಈ ಸಮಸ್ಯೆಗೆ ರಹಸ್ಯವಾಗಿಯೇ ಪರಿಹಾರವನ್ನು ಹುಡುಕಬೇಕು. ಗಂಡನ ಪರಿಚರ್ಯೆಗೆ ಭಂಗ ಉಂಟಾಗದಂತೆ ವ್ಯವಸ್ಥೆ ಮಾಡಿ ತಾನು ತವರಿಗೆ ಹೋಗಿ ಬರಬೇಕೆಂದು ಚಿಂತಿಸಿದಳು. ತಂದೆಯ ನೆರವನ್ನು ಪಡೆಯಲು ಒಂದು ಉಪಾಯವನ್ನು ತಾನೇ ಯೋಚಿಸಿದಳು. ತನ್ನ ಛಾಯೆಗೆ ಪ್ರಾಣವನ್ನು ಎರೆದಳು. ಮಕ್ಕಳನ್ನು, ಗಂಡನನ್ನು ಕ್ರಮ ತಪ್ಪಿಸದೆ ಸೇವಿಸಬೇಕೆಂದು ಕಟ್ಟಪ್ಪಣೆ ಮಾಡಿ, ಸಂಜ್ಞಾದೇವಿಯು ರಹಸ್ಯವಾಗಿ ಗಂಡನಿಗೆ ತಿಳಿಯದಂತೆ ತವರಿನತ್ತ ನಡೆದಳು.

ಚಿತ್ರಪಟ ಶಿಲ್ಪಿ : [illegible]
ಮೊಬೈಲ್ : 9986613948



8

ಮಗಳು ಅನಿರೀಕ್ಷಿತವಾಗಿ ಒಂಟಿಯಾಗಿ ಮನೆಗೆ ಬಂದದ್ದು ಕಂಡ ತ್ವಷ್ಟ ಬ್ರಹ್ಮನಿಗೆ ಕಸಿವಿಸಿಯಾಯಿತು. 'ಮದುವೆಯಾದ ಮಗಳು ಅಳಿಯನೊಂದಿಗೇ ತವರಿಗೆ ಬಂದರೆ ಚೆನ್ನ' ಎಂದು ಮಗಳಿಗೆ ಹೇಳಿದ. 'ಗಂಡನೊಂದಿಗೆ ತವರಿಗೆ ಸಧ್ಯವಲ್ಲಿ ಬರುವುದು ಸಾಧ್ಯವಿರಲಿಲ್ಲ' ಎಂದಾಗ ತ್ವಷ್ಟ ಬ್ರಹ್ಮನು ತನ್ನ ದಿವ್ಯ ದೃಷ್ಟಿಯಿಂದ ಪರಿಸ್ಥಿತಿಯನ್ನು ಗ್ರಹಿಸಿ 'ನೀನೇ ತಪಸ್ಸು ಮಾಡಿ ಗಂಡನ ತೇಜಸ್ಸನ್ನು ನಿಗ್ರಹಿಸಲಾರದೆ ತವರಿಗೆ ಅಪಮಾನವಾಗುವಂತೆ ಏಕಾಂಗಿಯಾಗಿ ರಹಸ್ಯವಾಗಿ, ಓಡಿ ಬಂದಿರುವ ನಿನಗೆ ಶಾಪವೇ ಯೋಗ್ಯವಾದದು. ಕುದುರೆಯಾಗಿ ಕಾಡಿನಲ್ಲಿರು' ಎಂದು ಶಪಿಸಿದ.

ಚಿತ್ರಪಟ ಶಿಲ್ಪಿ : ಶ್ರೀ ಜಿ.ಎಸ್. ಸೋಮಾಚಾರ್, ಕಾರಂಜಕಟ್ಟೆ, ಕೋಲಾರ.
ಮೊಬೈಲ್ : 90081 85893



9

ವಿವಸ್ವನ್ ಆದಿತ್ಯನ ಸೇವೆಯನ್ನು ಛಾಯಾದೇವಿಯು ಬಹು ಶ್ರದ್ಧೆಯಿಂದ ಮಾಡುತ್ತಿದ್ದಳು. ಗಂಡನಿಗಾಗಲಿ, ಮಕ್ಕಳಿಗಾಗಲಿ ಆಕೆಯು ಸಂಜ್ಞಾದೇವಿಯಲ್ಲ ಎಂಬುದರ ಸುಳಿವೇ ತಿಳಿಯದಂತೆ ದಿನಗಳು ಮುಂದುವರಿದವು.

ಚಿತ್ರಕಲಾ ಶಿಲ್ಪಿ : ಶ್ರೀ ಆರ್. ವಿಶ್ವನಾಥ, ಹುಲಿಬಿದಿದ್ದಹಳ್ಳಿ, ಮುಳಬಾಗಿಲು ತಾ.
ಮೊಬೈಲ್ : 99863 77308



10

ಕಾಲಕ್ರಮದಲ್ಲಿ ಛಾಯಾದೇವಿಗೆ ಶನೈಶ್ಚರನೆಂಬ ಮಗ, ತಪತಿ ಎಂಬ ಮಗಳು ಹುಟ್ಟಿದರು. ಮಕ್ಕಳೆಲ್ಲರೂ ಆಟವಾಡುತ್ತಿದ್ದರು. ಶನೈಶ್ಚರನು ಕುಂಟ. ಯಮ ಅವನನ್ನು ತಮಾಷೆ ಮಾಡಿದ. ಇದರಿಂದ ಛಾಯಾದೇವಿ ಕೋಪಗೊಂಡು ಯಮನನ್ನು ಮೂದಲಿಸಿದಳು. ಯಮ ತಾಯಿಗೆ ಬಲಗಾಲನ್ನು ತೋರಿಸಿದ. ಇದರಿಂದ ಛಾಯಾದೇವಿ ಕೋಪದಿಂದ ಧುಗಿಲೆದ್ದು 'ನಿನ್ನ ಕಾಲು ಹಾಳಾಗಿ ಕೀವು, ರಕ್ತ, ಹುಳುಗಳಿಂದ ತುಂಬಲಿ' ಎಂದು ಶಪಿಸಿದಳು.

ಉಬ್ಬು ಶಿಲ್ಪಿ : ಶ್ರೀ ಎ. ಮಂಜುನಾಥ, ಮಾಲವಿ ಗ್ರಾಮ (ಬಳ್ಳಾರಿ ಜಿಲ್ಲೆ)
ಮೊಬೈಲ್ : 99021 02443



11

ಯಮನು ಖಿನ್ನನಾಗಿ ತಂದೆಯ ಬಳಿಗೆ ದೂರನ್ನು ಒಯ್ದ. 'ಕಾಲಿನ ರಕ್ತ-ಕೀವು, ಹುಳುಗಳನ್ನು ಪಕ್ಷಿಯೊಂದು ತಿಂದ ನಂತರ ಯಮನ ಕಾಲು ಎಂದಿನಂತೆ ಸಾಧಾರಣವಾಗಿರುತ್ತದೆ' ಎಂದು ವಿಶಾಪವನ್ನು ತಂದೆಯು ಹೇಳಿದ.

ಚಿತ್ರಪಟ ಶಿಲ್ಪಿ : ಶ್ರೀ ಕೆ. ಜಕಣಾಚಾರಿ, ಸೋಗಿ, ಹೂವಿನಹಡಗಲಿ – 583219,
ಮೊಬೈಲ್ : 99162 76696



12

ಈ ಘಟನೆಯಿಂದ ಮನನೊಂದು ವೈರಾಗ್ಯವನ್ನು ತಳೆದ ಯಮನು ತಪಸ್ಸನ್ನು ಪ್ರಾರಂಭಿಸಿದ. ಅದರಿಂದ ಧರ್ಮದೇವನೆಂದು ಹೆಸರು ಪಡೆದು ಪಾಪ-ಪುಣ್ಯಗಳನ್ನು ಗಮನಿಸುವ ಕೆಲಸವನ್ನು ದೇವತೆಗಳಿಂದ ಪಡೆದುಕೊಂಡು ಲೋಕೇಶ್ವರನಾದ.

ಚಿತ್ರಪಟ ಶಿಲ್ಪಿ : ಶ್ರೀ ಎಂ. ಆರ್ ವೀರಭದ್ರಾಚಾರ್, ಮಾಗಡಿ ಮುಖ್ಯರಸ್ತೆ, ಬೆಂಗಳೂರು. ಮೊಬೈಲ್ : 95352 52009



13

'ತಾಯಿಯೇ ಮಗನಿಗೆ ಶಾಪ ನೀಡುವುದು ಎಂದರೆ ತಾಯ್ತನಕ್ಕೆ ಕಳಂಕ. ಇದರಲ್ಲೇನೋ ರಹಸ್ಯ ಅಡಗಿದೆ' ಎಂದು ಗ್ರಹಿಸಿ, ಛಾಯಾದೇವಿಯನ್ನು ತೀವ್ರ ಸ್ವರದಲ್ಲಿ ಪ್ರಶ್ನಿಸಿದ ವಿವಸ್ವನ್ ಆದಿತ್ಯ ಛಾಯಾದೇವಿಯು ಗಂಡನ ಗದರಿಕೆಯಿಂದ ಹೆದರಿ ರಹಸ್ಯವನ್ನು ಬಯಲು ಮಾಡಿದಳು.

ಚಿತ್ರಪಟ ಶಿಲ್ಪಿ : ಶ್ರೀ ಆರ್. ಮೌನಾಚಾರ್, ಹುಲೇಕಲ್ಲು (ದಾವಣಗೆರೆ ಜಿಲ್ಲೆ).
ಮೊಬೈಲ್ : 99022 18101

14

ತನಗೆ ತೊಂದರೆಯಾದರೂ ಅದನ್ನು ಮೌನವಾಗಿ ಅನುಭವಿಸುತ್ತಾ, ಗಂಡನಿಗೆ ತೊಂದರೆಯಾಗದಂತೆ ಎಲ್ಲವನ್ನೂ ಅಣಿಗೊಳಿಸಿ ತನ್ನ ಸಮಸ್ಯೆಗೆ ತಂದೆಯ ಬಳಿ ಪರಿಹಾರ ಹುಡುಕಲು ಹೋಗಿರುವ ಮಡದಿಯ ಬಗ್ಗೆ ವಿವಸ್ವನ್ನನಲ್ಲಿ ಕರುಣೆ ಮೆಚ್ಚುಗೆಗಳುಂಟಾದುವು. ತನ್ನ ದಿವ್ಯ ದೃಷ್ಟಿಯಿಂದ ಆಕೆಯ ಪ್ರಸ್ತುತ ಸ್ಥಿತಿಯನ್ನೂ ಗ್ರಹಿಸಿದ. ಆಕೆಯ ರೂಪದಲ್ಲಿಯೇ ಕಾಡಿನಲ್ಲಿ ಆಕೆಯನ್ನು ಸೇರಿದ. ಗಂಡನನ್ನು ಕುದುರೆಯಾಗಿ ಕಂಡ ಸಂಜ್ಞಾಳಿಗೆ (ಅಶ್ವಿನಿಗೆ) ತುಂಬಾ ದುಃಖವಾಯಿತು. ತನ್ನ ಅಳಲನ್ನು ತೋಡಿಕೊಂಡಳು. ಇಬ್ಬರೂ ತಮ್ಮ ಸಮಸ್ಯೆಗೆ ತ್ವಷ್ಟ ಬ್ರಹ್ಮನಿಂದಲೇ ಪರಿಹಾರವನ್ನು ಪಡೆದುಕೊಳ್ಳಬೇಕೆಂದು ತೀರ್ಮಾನಿಸಿದರು. ಸ್ವಲ್ಪಕಾಲ ಆ ಪವಿತ್ರ ಅರಣ್ಯದಲ್ಲಿಯೇ ಇರಲು ಬಯಸಿದರು. ಆ ಕಾಲದಲ್ಲಿ ಇವರಿಗೆ ಅಶ್ವಿನಿಗಳು ಎಂಬ ಅವಳಿ ಮಕ್ಕಳು, ರೇವಂತ ಎಂಬ ಇನ್ನೊಬ್ಬ ಮಗ ಹುಟ್ಟಿದರು.

ಚಿತ್ರಕಾರ ಶಿಲ್ಪಿ : ಶ್ರೀ [illegible] ಕೆ. ಪತ್ತಾರ, ಬೆಳಗಾವಿ - 590001
ಮೊಬೈಲ್ : [illegible]



15

ಅಶ್ವಿನಿಗಳು ದೇವ ವೈದ್ಯರೆಂದು ಪ್ರಖ್ಯಾತರು. ತ್ವಾಷ್ಟ್ರೀ ಮಧು ಎಂದು ಪ್ರಖ್ಯಾತವಾದ ಮಧು ವಿದ್ಯೆಯ ಪರಂಪರೆಯನ್ನು ಅವರು ಮುಂದುವರಿಸಿದರು. ಇವರ ವಿವರ ಬೃಹದಾರಣ್ಯಕೋಪನಿಷತ್ತಿನ ಮಧುಕಾಂಡದಲ್ಲಿದೆ.

ಚಿತ್ರಪಟ ಶಿಲ್ಪಿ : ಶ್ರೀ ಎಂ.ಎಸ್ ಗುರುಪ್ರಸಾದ್, ಬಿಇಎಂಎಲ್ 4ನೇ ಹಂತ,
ಆರ್ ಆರ್. ನಗರ, ಬೆಂಗಳೂರು-98, ಮೊಬೈಲ್ : 99646 37847



**16**

ಕಾಡು ಜೀವನವನ್ನು ಸಾಕು ಮಾಡಬೇಕೆಂದು ಮಗಳು–ಅಳಿಯ ಇಬ್ಬರು ತ್ವಷ್ಟ ಬ್ರಹ್ಮನನ್ನು ಆಶ್ರಯಿಸಿ ಶಾಪದಿಂದ ಬಿಡುಗಡೆಗಾಗಿ ಪ್ರಾರ್ಥಿಸಿದರು. ತ್ವಷ್ಟವು ವಿವಸ್ವಂತ ಶಾಖವನ್ನು ಕಡಿಮೆ ಮಾಡುವುದೊಂದೇ ಈ ಸಮಸ್ಯೆಗೆ ಪರಿಹಾರವೆಂದು ಹೇಳಿದ. ಕಾಂತಿ ಕಿರಣಗಳನ್ನು ಕಡಿಮೆ ಮಾಡಬೇಕಾಗಿರುವುದನ್ನು ಅಳಿಯನಿಗೆ ವಿವರಿಸಿ ಒಪ್ಪಿಸಿದ. ವಿವಸ್ವನನ್ನು ಪಿಂಡಾಕೃತಿಗೆ ಬದಲಿಸಿ, ಸಾಣೆ ಮಣೆಗೆ ಸಿಲುಕಿಸಿ ಕಾಂತಿ ಕಿರಣಗಳನ್ನು ಕತ್ತರಿಸಿ ಅವನ ಶಾಖವನ್ನು ಕಡಿಮೆ ಮಾಡಿದ. ಹೀಗೆ ಕತ್ತರಿಸಿದ ಕಿರಣಗಳಿಂದ ದೇವತೆಗಳಿಗೆ ಆಯುಧಗಳನ್ನು ತ್ವಷ್ಟವೇ ತಯಾರಿಸಿಕೊಟ್ಟ. (ತ್ವಷ್ಟಾದುಹಿತ್ರೇವಹತುಂ ಕೃಣೋತೀತದಂ ವಿಶ್ವಭುವನಂ ಸಮೇತಿ । –ಋಗ್ವೇದ)



18

ಸಂಜ್ಞಾದೇವಿಗೆ ಯಮುನಾ [illegible] ಮಗಳಿದ್ದಳು. ಆಕೆಯು ಕುರೂಪಿ. ಆಕೆಯ ಮದುವೆಯು ವಿವಸ್ವಂತನಿಗೆ ದೊಡ್ಡ ಸಮಸ್ಯೆಯಾಯಿತು.

ಯಮುನಾ ಈ ಬಗ್ಗೆ ತಂದೆಗೆ ಹೇಳಿದಳು: 'ಆಯಸ್ಸು, ರೂಪ, ಧನ, ಪತ್ನಿ, ಪುತ್ರರು ನಮ್ಮ ಪೂರ್ವಜನ್ಮದ ಕರ್ಮದ ಅನುಸಾರವಾಗಿ ದೊರೆಯುತ್ತವೆ. ಆದ್ದರಿಂದ ನೀವು ವಂಶಾನುಕ್ರಮ ಪದ್ಧತಿಯನ್ನು ಅನುಸರಿಸಿ, ನಿಮ್ಮ ಮಗಳ ಮದುವೆಯನ್ನು ನೆರವೇರಿಸಿ. ಅದೇ ಶ್ರೇಷ್ಠವಾದ ಮಾರ್ಗ'.

[illegible] ಶ್ರೀ ಸುರೇಶ್ ನಾಯಕ್, ಮಾಳಗ್ರಾಮ, ಕಾರ್ಕಳ ತಾ.
ಮೊಬೈಲ್ : 99645 82626



19

ಯಮುನಾಳ ಸೋದರಮಾವನಾದ ವಿಶ್ವರೂಪಾಚಾರ್ಯ(ತ್ರಿಶಿರ)ನೊಂದಿಗೆ ವಿವಾಹ ಪ್ರಸ್ತಾಪವನ್ನು ವಿವಸ್ವನ್ ಮಂಡಿಸಿದ. ಕಶ್ಯಪ ಬ್ರಹ್ಮನೂ ಅಂಗೀಕರಿಸಿದ. ವಿಶ್ವರೂಪಾಚಾರ್ಯ (ತ್ರಿಶಿರ) ಮತ್ತು ಯಮುನೆಯರ ಮದುವೆಯು ವಿಜೃಂಭಣೆಯಿಂದ ನಡೆಯಿತು.

ಚಿತ್ರಪಟ ಶಿಲ್ಪಿ : ಶ್ರೀ ನವೀನ್ ಕೆ. ಪೋತದಾರ್, ರೋಣ, ಗದಗ ಜಿಲ್ಲಾ
ಮೊಬೈಲ್ : 95357 64801



20

ಯಮುನೆ(ವಿಷ್ಟಿ)ಗೆ ಏಳು ಮಂದಿ ಗಂಡು ಮಕ್ಕಳಾದರು–ಗಂಡ, ಅತಿಗಂಡ, ರಕ್ತಾಕ್ಷ, ಕ್ರೋಧನ, ವ್ಯಯ, ದುರ್ಮುಖ ಮತ್ತು ಹರ್ಷಣ. ಹರ್ಷಣ ವಿನಾ ಎಲ್ಲರೂ ಕುರೂಪಿಗಳೇ. ಹರ್ಷಣನು ತನ್ನ ಸೋದರ ಮಾವನಾದ ಯಮ ಧರ್ಮನನ್ನು ಸಮೀಪಿಸಿ, 'ನನ್ನ ತಂದೆ ತಾಯಿಗಳು ಭಯಂಕರ ಸ್ವರೂಪಿಗಳು. ಆದ್ದರಿಂದ ನನ್ನ ಸೋದರರೆಲ್ಲರೂ ಭಯಂಕರ ಸ್ವರೂಪಿಗಳಾಗಿದ್ದರೆ. ಆದರೆ ಅವರು ಶಾಂತ ಮತಿಗಳು. ಮಹಾತ್ಮರು. ಅವರು ಸುಂದರರಾಗುವ ಮಾರ್ಗವನ್ನು ತಾವು ಉಪದೇಶಿಸಬೇಕು. ಈ ಉಪದೇಶವನ್ನು ಪಡೆಯದೆ ನಾನು ಇಲ್ಲಿಂದ ಹೋಗುವುದಿಲ್ಲ' ಎಂದು ತನ್ನ ಸಂಕಲ್ಪವನು ತಿಳಿಸಿದ.

ಚಿತ್ರಪಟ ಶಿಲ್ಪಿ ಶ್ರೀ ಕೆ [illegible], ಸೋಗಿ, ಹೂವಿನಹಡಗಲಿ – 583 219
ಮೊಬೈಲ್ 99162 76696



21

'ಕುಲೋದ್ಧಾರಕನಾದ ಪುತ್ರನೇ, ಗೌತಮೀ ನದಿಯ ತೀರದಲ್ಲಿ ಸೃಷ್ಟಿಕರ್ತನಾದ ವಿಶ್ವಕರ್ಮನನ್ನು ಕುರಿತು ತಪಸ್ಸು ಮಾಡಿ ಆತನನ್ನು ಪ್ರಸನ್ನಗೊಳಿಸಿಕೊಂಡರೆ ಇದು ಸಾಧ್ಯವಾಗುತ್ತದೆ' ಎಂದು ಯಮ ಧರ್ಮನು ಹೇಳಿದ. ಹರ್ಷನು ಹಾಗೆಯೇ ತಪಸ್ಸನ್ನು ಆಚರಿಸಿ ವಿಶ್ವಕರ್ಮನನ್ನು ಸಂಪ್ರೀತಗೊಳಿಸಿಕೊಂಡ. ಇದರಿಂದ ಹರ್ಷಣನ ತಾಯಿ ತಂದೆಗಳು ಭದ್ರರಾದರು. ಸೋದರರ ಹೆಸರುಗಳು ಸರ್ವಭದ್ರ, ಭದ್ರಪತ್ತ, ಜ್ಞಾನಭದ್ರ, ವಿಶ್ವಭದ್ರ, ಮಣಿಭದ್ರ ಎಂದಾಯಿತು. ಸ್ವಯಂ ಹರ್ಷಣನೇ ಪ್ರಹರ್ಷ ಎಂದು ಬದಲಾದ. ಈ ವಿವರಣೆಯು ಬ್ರಹ್ಮಪುರಾಣದ ಭದ್ರತೀರ್ಥ ವರ್ಣನದಲ್ಲಿ ಹೇಳಿದೆ.

ಚಿತ್ರಪಟ ಶಿಲ್ಪಿ : ಶ್ರೀ ಆರ್. ಮೌನಾಚಾರ್, ಹಾರೆಕಲ್ಲು (ದಾವಣಗೆರೆ ಜಿಲ್ಲೆ),
ಮೊಬೈಲ್ : 99022 18101



22

ದೇವೇಂದ್ರನು ತ್ರಿಲೋಕಾಧಿಪತಿ. ಶಚೀದೇವಿಯೊಂದಿಗೆ ಒಡ್ಡೋಲಗದಲ್ಲಿದ್ದ. ಇಂದ್ರನು ದೇವ, ಋಷಿ, ಗಂಧರ್ವ, ಯಕ್ಷರ ಸೇವೆಯನ್ನು ಪಡೆಯುತ್ತಿದ್ದ. ಇದರಿಂದ ಇಂದ್ರನಲ್ಲಿ ಅಹಂಕಾರ ಮೊಳೆದಿತ್ತು. ದೇವಗುರು ಬೃಹಸ್ಪತಿಯು ಒಡ್ಡೋಲಗದ ಪ್ರವೇಶ ಮಾಡಿದರೂ ಇಂದ್ರನು ಅದನ್ನು ಉಪೇಕ್ಷಿಸಿದ. ಇದನ್ನು ಗುರ್ತಿಸಿದ ದೇವ ಗುರು ಮೌನವಾಗಿ ಹಿಂತಿರುಗಿ ಯೋಗ ಮಾಯೆಯಿಂದ ಅದೃಶ್ಯನಾದ.

ಇಂದ್ರನು ತನ್ನ ತಪ್ಪನ್ನು ಅರಿತುಕೊಳ್ಳುವ ವೇಳೆಗೆ ತಡವಾಗಿತ್ತು. ಬಹುವಾಗಿ ಹುಡುಕಿಸಿದರೂ ಗುರು ಕಾಣಿಸಲಿಲ್ಲ. ಗುರುವಿನ ನೆರವಿಲ್ಲದೆ ದೇವತೆಗಳು ಶಾಂತಿಯಿಂದ ಬದುಕುವುದು ಅಸಾಧ್ಯವಾಯಿತು.



23

ಗುರುವನ್ನು ಹುಡುಕಲು ಇಂದ್ರನು ಬ್ರಹ್ಮನನ್ನು ಆಶ್ರಯಿಸಿದ. 'ಬೃಹಸ್ಪತಿಯನ್ನು ಉಪೇಕ್ಷಿಸಿ ದುರ್ಬಲರಾಗಿರುವ ನಿಮಗೆ ಗುರುವಿನ ಅವಶ್ಯಕತೆ ಇದೆ. ದೈತ್ಯರು ನಿಮ್ಮ ಮೇಲೆ ಎರಗಿ ನಿಮ್ಮನ್ನು ಸಂಪೂರ್ಣವಾಗಿ ಗೆಲ್ಲಬಹುದು. ಸಂಕಟಕಾಲದಲ್ಲಿ ಆಸರೆ ನೀಡಿ ಮಾರ್ಗದರ್ಶನ ಮಾಡುವ, ನಿಮ್ಮ ರಕ್ಷಣೆಗಾಗಿ ತಪಸ್ಸು ಮಾಡಬಹುದಾದದ ಗುರು ವಿಶ್ವರೂಪಾಚಾರ್ಯನೇ. ಆತನು ಶಾಂತಸ್ವಭಾವಿ. ಶುಕ್ರಾಚಾರ್ಯನ ಮೊಮ್ಮಗ. ಆದ್ದರಿಂದ ದಾನವರ ಮಾರ್ಗವನ್ನು ಸುಲಭವಾಗಿ ಗ್ರಹಿಸಬಲ್ಲ. ಅವರಿಗೆ ತಿರುಗೇಟೂ ನೀಡಬಲ್ಲ. ಆದರೆ ವಿಶ್ವರೂಪಾಚಾರ್ಯನಿಗೆ ದಾನವರ ಬಗ್ಗೆ ಮಮತೆಯುಂಟು; ಸಹಾಭೂತಿಯುಂಟು. ಅದನ್ನು ಮಾತ್ರ ದೇವತೆಗಳಾದ ನೀವು ಸಹಿಸಬೇಕು' ಎಂದು ಬುದ್ಧಿಯನ್ನೂ ಬ್ರಹ್ಮದೇವನು ಹೇಳಿದ.

ಚಿತ್ರಪಟ ಶಿಲ್ಪಿ : ಶ್ರೀ ಎಂ. ಆರ್. ವೀರಭದ್ರಾಚಾರ್, ಮಾಗಡಿ ಮುಖ್ಯರಸ್ತೆ,
ಬೆಂಗಳೂರು. ಮೊಬೈಲ್ : 95352 52009



24

ದೇವತೆಗಳು ವಿಶ್ವರೂಪಾಚಾರ್ಯರ ಆಶ್ರಮವನ್ನು ಪ್ರವೇಶಿಸಿ 'ಈಗ ನಾವು ದಾನವರಿಂದ ಪರಾಜಿತರಾಗಿದ್ದೇವೆ. ನಿಮ್ಮ ತಪೋಬಲದಿಂದ ನಮ್ಮ ದುಃಖವನ್ನು ದೂರಮಾಡಿ, ನಮ್ಮನ್ನು ವಿಜಯವಂತರನ್ನಾಗಿ ಮಾಡಿ. ತ್ವಷ್ಟವಂಶೋದ್ಭವರಾಗಿರುವ ನೀವು ಜನ್ಮತಃ ನಮ್ಮ ಗುರುಗಳಾಗಿದ್ದೀರಿ. ಬ್ರಹ್ಮಕರ್ಮ-ಶಿಲ್ಪಕರ್ಮಗಳಿಂದ ಪರಿಪೂರ್ಣ ಹಿರಿಮೆಯನ್ನು ಸಾಧಿಸಿದ್ದೀರಿ. ಆದ್ದರಿಂದ ತಮ್ಮ ಪಾದಗಳಿಗೆ ಎರಗುವುದೇ ಪುಣ್ಯಕಾರ್ಯ. ನೀವೇ ಆಚಾರ್ಯರಾಗಿದ್ದುಕೊಂಡು ನಮ್ಮನ್ನು ರಕ್ಷಿಸಬೇಕು' ಎಂದು ದೇವೇಂದ್ರ ಮತ್ತು ಎಲ್ಲಾ ದೇವತೆಗಳೂ ಪ್ರಾರ್ಥಿಸಿ ವಿಶ್ವರೂಪಾಚಾರ್ಯರ ಪಾದಕ್ಕೆರಗಿದರು.

ವಿಶ್ವರೂಪಾಚಾರ್ಯರು 'ಪೌರೋಹಿತ್ಯ ಕರ್ಮದಿಂದ ಬ್ರಹ್ಮತೇಜವು ನಶಿಸುತ್ತದೆ. ಲೋಕೇಶ್ವರರಾಗಿರುವ ತಾವೇ ಈ ಕಿರಿಯನನ್ನು ಪ್ರಾರ್ಥಿಸುವಾಗ ನಿರಾಕರಿಸುವುದು ಸಭ್ಯಲಕ್ಷಣವಲ್ಲ. ತಮ್ಮಂತಹ ಪ್ರಾಜ್ಞರನ್ನು ಸಂತೋಷಗೊಳಿಸುವುದೇ ಭಗವತ್ಸೇವೆ. ತಮ್ಮ ಸೇವೆಯಲ್ಲಿ ನನ್ನೆಲ್ಲವನ್ನೂ ತೊಡಗಿಸುತ್ತೇನೆ' ಎಂದರು ದೇವತೆಗಳು ವಿಶ್ವರೂಪಾಚಾರ್ಯರನ್ನು ಆಚಾರ್ಯನನ್ನಾಗಿ ಸ್ವೀಕರಿಸಿದರು.

ಚಿತ್ರಪಟ ಶಿಲ್ಪಿ ಶ್ರೀ ಎಂ.ಎಸ್ ಗುರುಪ್ರಸಾದ್, [illegible] ಮೊಬೈಲ್ 99846 37847



25

ವಿಶ್ವರೂಪಾಚಾರ್ಯ ತನ್ನ ತಪೋಬಲದಿಂದ ವೈಷ್ಣವೀ ವಿದ್ಯೆಯನ್ನು ಬಳಸಿ ಇಂದ್ರನನ್ನು ಬಲಶಾಲಿಯನ್ನಾಗಿ ಮಾಡಲು. ನಾರಾಯಣ ಕವಚವನ್ನು ಉಪದೇಶಿಸಿದ ಮಂತ್ರ ಪ್ರಭಾವದಿಂದ ಬಹು ದೊಡ್ಡ ರಕ್ಷಾ ಕವಚ ಇಂದ್ರನನ್ನು ಆವರಿಸಿಕೊಂಡಿತು. ಇದರಿಂದ ಉತ್ಸಾಹಗೊಂಡ ಇಂದ್ರನು ದಾನವರ ವಿರುದ್ಧ ಯುದ್ಧಕ್ಕೆ ಹೊರಟ.

ಚಿತ್ರಪಟ ಶಿಲ್ಪಿ : ಶ್ರೀ ಎ. ಮಂಜುನಾಥ, ಮಾಲವಿ, ಎಚ್ ಬಿ. ಹಳ್ಳಿ (ಬಳ್ಳಾರಿ ಜಿಲ್ಲೆ),
ಮೊಬೈಲ್ : 99022 02443



26

ಇಂದ್ರನು ದೇವತೆಗಳ ಸೈನ್ಯದೊಂದಿಗೆ ದಾನವರ ಮೇಲೆ ಧಾಳಿಯನ್ನು ನಡೆಸಿದ. ಮಂತ್ರ ಪೂತವಾಗಿದ್ದ ನಾರಾಯಣ ಕವಚವು ಇಂದ್ರನಿಗೆ ಮತ್ತು ದೇವತೆಗಳಿಗೆ ರಕ್ಷೆಯಾಗಿದ್ದು ದಾನವರು ಪರಾಜಿತರಾಗಿ ರಣರಂಗದಿಂದ ಓಡಿದರು.

ಬಳ್ಳಾರಿ ಜಿಲ್ಲೆ . ಮೊಬೈಲ್ 99022 02443



27

ತ್ವಷ್ಟೃಬ್ರಹ್ಮನ ಪತ್ನಿ ವೈರೋಚನಿಯು ದಾನವಸ್ತ್ರೀ. ಆದ್ದರಿಂದ ವಿಶ್ವರೂಪಾಚಾರ್ಯರಿಗೆ ದಾನವರ ಬಗ್ಗೆ ದ್ವೇಷವಿರಲಿಲ್ಲ. ದೇವ-ದಾನವರು ಇಬ್ಬರೂ ಸುಖವಾಗಿರಬೇಕೆಂಬುದೇ ವಿಶ್ವರೂಪಾಚಾರ್ಯರ ಬಯಕೆ. ಆಪತ್ತಿನಲ್ಲಿದ್ದ ಇಂದ್ರನಿಗೆ ಈ ವಿವರವನ್ನು ಬ್ರಹ್ಮದೇವನೇ ಹೇಳಿದ್ದರೂ ಗಮನಿಸಿರಲಿಲ್ಲ. ವಿಶ್ವರೂಪಾಚಾರ್ಯರ ಧೋರಣೆ ಇಂದ್ರನಿಗೆ ಈಗ ಸರಿ ಎನಿಸಲಿಲ್ಲ. ತಾನು ವಿಶ್ವರೂಪಾಚಾರ್ಯರನ್ನು ದೂರ ಮಾಡಿದರೆ ದಾನವರಿಗೆ ನೆರವಾಗುತ್ತಾರೇನೋ ಎಂಬ ಭಯವು ಹೊಸದಾಗಿ ಸೇರಿಕೊಂಡಿತ್ತು. ಇಂದ್ರನು ತನ್ನ ಆಚಾರ್ಯರನ್ನು ಕೊಲ್ಲಲು ಹೆಚ್ಚುಕಾಲ ಕಾಯಲಿಲ್ಲ. ವಿಶ್ವರೂಪಾಚಾರ್ಯರ ಮೂರೂ ತಲೆಗಳನ್ನೂ ಒಮ್ಮೆಲೆಗೇ ಇಂದ್ರನೇ ಕತ್ತರಿಸಿ ಹಾಕಿದ.

ಚಿತ್ರಪಟ ಶಿಲ್ಪಿ : ಶ್ರೀ ಆರ್. ಮೌನಾಚಾರ್, ಹಾಲೇಕಲ್ಲು (ದಾವಣಗೆರೆ ಜಿಲ್ಲೆ)
ಮೊಬೈಲ್ : 99022 18101

28

ತನ್ನ [illegible] ಬ್ರಹ್ಮಕರ್ಮ ಶಿಲ್ಪಕರ್ಮಗಳ ಪಾಠವನ್ನು ಮಾಡುತ್ತಿದ್ದವನನ್ನು ದೇವತೆಗಳ ಆಚಾರ್ಯರಾಗಬೇಕೆಂದು ಆಹ್ವಾನಿಸಿ, ನಂತರ ಆತನನ್ನು ಅನುಮಾನ[illegible] ಕೊಂದದ್ದರಿಂದ ಇಂದ್ರನನ್ನೇ ಕೊಲ್ಲಬೇಕೆನಿಸುವಷ್ಟು ಕೋಪ ತ್ವಷ್ಟ ಬ್ರಹ್ಮನಿಗೆ ಉಂಟಾಗಿತ್ತು. ಇದಕ್ಕಾಗಿ ತ್ವಷ್ಟವು ವಿಶೇಷ ಯಜ್ಞವನ್ನು ಆರಂಭಿಸಿದ. ಇಂದ್ರ ಶತ್ರುರ್ವರ್ಧಸ್ವ ಎಂಬ [illegible] ಹವಿಸ್ಸು ಅರ್ಪಿಸಿದ. ತ್ವಷ್ಟೃವಿನ ದುಃಖದ ಆವೇಗದಲ್ಲಿ ಮಂತ್ರದ ಸ್ವರ ತಪ್ಪಿದ್ದರಿಂದ ಮಂತ್ರಾರ್ಥವು 'ಇಂದ್ರನಿಂದ ನಾಶವಾಗುವ ಶತ್ರು ವರ್ಧಿಸಲಿ' ಎಂದು ಬದಲಾಗಿತ್ತು. [illegible] ಬಹು ಭಯಂಕರ ಕಾಯದವನೊಬ್ಬ ಕಾಣಿಸಿಕೊಂಡ. ಇವನನ್ನು ವೃತ್ರ ಎಂದರು. ದಿನದಿನಕ್ಕೂ ಎಲ್ಲಾ ಲೋಕಗಳನ್ನು ಆಕ್ರಮಿಸುತ್ತಾ ಬೆಳೆದ.

ದೇವತೆಗಳು ತಮ್ಮ [illegible]ಯಗಳೊಂದಿಗೆ ವೃತ್ರನ ವಿರುದ್ಧ ಯುದ್ಧವನ್ನು ಮಾಡತೊಡಗಿದರು. ಆದರೆ ಅದರ ಪ್ರಭಾವ ಶೂನ್ಯ. ಇಂದ್ರನಿಗೆ ತನ್ನ ತಪ್ಪು ಈಗ ಮನವರಿಕೆಯಾಗಿತ್ತು. ಬ್ರಹ್ಮಹತ್ಯೆಯು ಈಗಾಗಲೇ ಇಂದ್ರನನ್ನು ಆವರಿಸಿತ್ತು.

[illegible] ಶ್ರೀ [illegible], [illegible] ತಾ.
ಮೊಬೈಲ್ : 99459 52607



30

[illegible] [illegible] ಆಥರ್ವಣ ಮಹರ್ಷಿಯ ಆಶ್ರಮವನ್ನು ಪ್ರವೇಶಿಸಿದ. ಆ ಮಹರ್ಷಿಯ ಬದುಕೇ ಲೋಕ ಕಲ್ಯಾಣಾರ್ಥವಾಗಿತ್ತು. ತನ್ನನ್ನು ಆಶ್ರಯಿಸಿ ಬಂದವರಿಗೆ 'ಇಲ್ಲ' ಎಂದು [illegible] [illegible] ಇಲ್ಲ. ಬ್ರಹ್ಮಜ್ಞಾನಿ. ಆತನಿಗೆ ಲೋಕವೇ ಕನಸಾಗಿತ್ತು. ಅಪರಿಚಿತನೊಬ್ಬ ಬಂದು ಕೈಜೋಡಿಸಿ ನಿಂತು 'ನಿಮ್ಮಲ್ಲಿಯ ಜ್ಞಾನವನ್ನು ಪಡೆಯಲು ಬಂದಿರುವ ಅತಿಥಿ. [illegible] [illegible] [illegible] ವಚನ ಕೊಟ್ಟರೆ ನನ್ನ ಪ್ರಾರ್ಥನೆಯನ್ನು ತಮ್ಮಲ್ಲಿ ಅರಿಕೆ ಮಾಡಿಕೊಳ್ಳುತ್ತೇನೆ' ಎಂದು ವಿನೀತನಾಗಿ ಪ್ರಾರ್ಥಿಸಿದ. ದಧ್ಯಜ್ ಆಥರ್ವಣ ಮಹರ್ಷಿ 'ವಚನ ಕೊಟ್ಟ[illegible] [illegible]

ಚಿತ್ರಪಟ ಶಿಲ್ಪಿ : ಶ್ರೀ ಸೂರಜ್ ನಾಯಕ್, ಮಾಳಗ್ರಾಮ, ಕಾರ್ಕಳ ತಾಃ (ಉಡುಪಿ ಜಿಲ್ಲೆ)
ಮೊಬೈಲ್ : 99645 82626



31

ತರುವಾಯ ತನ್ನ ಪರಿಚಯವನ್ನು ಹೇಳಿ [illegible] ತೋರಿಸಿದ ದೇವೇಂದ್ರ! ಮಾತು ಕೊಟ್ಟಾಗಿತ್ತು! ಇಂದ್ರನು 'ಮಧುವಿದ್ಯೆಯನ್ನು ಉಪದೇಶಿಸಿ' ಎಂದು ಕೋರಿದ.

'ಮಧುವಿದ್ಯೆಯನ್ನು ಸಿದ್ಧಿಸಿಕೊಳ್ಳುವುದರಲ್ಲಿ ದೇವ- [illegible] ಎಂಬ ಅಂತರವಿಲ್ಲ. ನಿನ್ನ ಭೋಗವಿದ್ಯೆಯನ್ನು ಬಿಡಬೇಕು. ಅಧಿಕಾರ ದಾಹ ತೊರೆದು ಜಿತೇಂದ್ರಿಯನಾಗಬೇಕು. ತೃಷ್ಣ ಬ್ರಹ್ಮನಿಂದ ಪ್ರವರ್ತಿತವಾಗಿರುವ ಈ ವಿದ್ಯೆಯು [illegible] ಪರಂಪರಾಗತವಾಗಿ ಬಂದಿದೆ. ಕೊಟ್ಟ ವಚನಕ್ಕೆ ಕಟ್ಟುಬಿದ್ದು ನಿನಗೆ ಉಪದೇಶಿಸುತ್ತೇನೆ' ಎಂದು ಹೇಳಿಯೇ ದಧ್ಯಜ್ ಆಥರ್ವಣ ಮಹರ್ಷಿಯ ಮಧುವಿದ್ಯೆಯನ್ನು [illegible]

[illegible] : 95351 57021



32

ಇಂದ್ರನನ್ನು ತೀರಾಸಾಮಾನ್ಯನೆಂದು ಪರಿಗಣಿಸಿದ ದಧ್ಯಜ್ ಮಹರ್ಷಿಯ ಬಗ್ಗೆ ಇಂದ್ರನಿಗೆ ಅಪಾರ ಸಿಟ್ಟುಬಂತು. 'ಮಹರ್ಷಿ, ಈ ವಿದ್ಯೆಯನ್ನು ಇನ್ನು ಮುಂದೆ ಬೇರೆ ಯಾರಿಗೆ ಉಪದೇಶಿಸಿದರೂ ನಾನೇ ಬಂದು ನಿಮ್ಮ ತಲೆಯನ್ನು ಕತ್ತರಿಸಿ ಹಾಕುತ್ತೇನೆ' ಎಂದು ಹೇಳಿ ಇಂದ್ರನು ಅಲ್ಲಿಂದ ಹೊರಟ.

ಮೊಬೈಲ್ : 90081 85893



33

ತಕ್ಷನು ಆಯುಧ ಶಿಲ್ಪಿ. ಇಂದ್ರನಿಗಾಗಿ ಆತನು ವಜ್ರಾಯುಧವನ್ನು ತಯಾರಿಸಿಕೊಟ್ಟ. ಆದರೆ ಇಂದ್ರನಿಗೆ ಅದರ ಮಂತ್ರ ಮತ್ತು ಪ್ರಯೋಗದ ತಿಳಿವಿರಲಿಲ್ಲ. ತಕ್ಷಕನಿಗೆ ಹವಿರ್ಭಾಗವನ್ನು ಕೊಡುವುದಾಗಿ ವಚನ ನೀಡಿ ಯುದ್ಧದಲ್ಲಿ ತನ್ನ ಪರವಾಗಿ ಆ ಆಯುಧವನ್ನು ವೃತ್ರನ ಮೇಲೆ ಪ್ರಯೋಗಿಸಬೇಕೆಂದು ಬೇಡಿ ಶಿಲ್ಪಿಯನ್ನು ಒಪ್ಪಿಸಿದ. ಆಯುಧ ಪ್ರಯೋಗದಿಂದ ಆಗಬಹುದಾದ ಪಾಪಕೃತ್ಯದ ಫಲವನ್ನು ತಾನೇ ಹೊರುವುದಾಗಿಯೂ ಇಂದ್ರನು ಅಂಗೀಕರಿಸಿದ.

ಚಿತ್ರಪಟಶಿಲ್ಪಿ : ಮೌನೇಶ್ವರ ನಾಗಲಿಂಗ ಪತ್ತಾರ, ಬೆಳಗಾವಿ
ಮೊಬೈಲ್ : 95383 06775



34

ವೃತ್ರನು ಮಹಾಭಯಂಕರನಾಗಿದ್ದ. ಮದವೇರಿದ ಆನೆಯಂತೆ ಒಮ್ಮೆ ಘೀಳಿಟ್ಟರೆ, ಮತ್ತೊಮ್ಮೆ ಸಿಂಹದಂತೆ ಘರ್ಜಿಸುತ್ತಿದ್ದ. ಅವನ ಪಾದ ತಾಡನಕ್ಕೆ ನೆಲ ಕಂಪಿಸುತ್ತಿತ್ತು. ತ್ರಿಶೂಲವನ್ನು ಎಲ್ಲಾ ದಿಕ್ಕುಗಳಲ್ಲೂ ತಿರುಗಿಸುತ್ತಿದ್ದ. ದೇವತೆಗಳಲ್ಲಿ ಬಹುಪಾಲು ಅವನ ಘರ್ಜನೆ, ಓಡಾಟಕ್ಕೆ ಭಯಾಕ್ರಾಂತರಾಗಿ ಮೂರ್ಛಿತರಾಗುತ್ತಿದ್ದರು.

ಚಿತ್ರಕಲೆ : ಶ್ರೀ ನವೀನ್ ಕೆ ಹೊಳಕದಾರ್, ರೋಣ, (ಗದಗ ಜಿಲ್ಲೆ)
ಮೊಬೈಲ್ : 95357 04801



35

ಯುದ್ಧವು ಘೋರವಾಗಿ ಸಾಗಿತ್ತು. ಅಸಮಬಲರ ಕಾಳಗವೆಂಬುದು ಮೇಲುನೋಟಕ್ಕೇ ಗೊತ್ತಾಗುತ್ತಿತ್ತು. ಇಂದ್ರನನ್ನು ನೋಡಿದ ವೃತ್ರ 'ನಿನ್ನ ಗುರುವಾಗಿದ್ದ ನನ್ನ ಅಣ್ಣನನ್ನು ನಿರ್ದಯನಾಗಿ ಕೊಂದ ಪಾಪಿಯೇ, ಇಲ್ಲಿಗೆ ಬರಲು ಇಷ್ಟು ಕಾಲ ಬೇಕಾಯಿತೇ?... ನಿನ್ನ ಪಾಪದ ಕೊಡ ತುಂಬಿದೆ. ಈಗಾಗಲೇ ಕೀರ್ತಿ–ಲಕ್ಷ್ಮೀಯರು ನಿನ್ನನ್ನು ಬಿಟ್ಟಿದ್ದಾರೆ... ಅಜ್ಞಾನಿ ದೇವತೆಗಳು ಮಾತ್ರವೇ ನಿನ್ನೊಡನಿದ್ದಾರೆ... ನಿನ್ನ ಶಕ್ತಿಯಾಗಿರುವ ನಾರಾಯಣ ಕವಚವು ನನ್ನ ಮೇಲೆ ಯಾವ ಪ್ರಭಾವವೂ ಬೀರದಂತೆ ನನ್ನ ತಂದೆ ಅಭಿಮಂತ್ರಿದ್ದಾರೆ ಗೊತ್ತೇ?' ಎಂದು ನಕ್ಕ.

ಚಿತ್ರಪಟ ಶಿಲ್ಪಿ : ಶ್ರೀ ಟಿ ಬೋರಯ್ಯ ಬುದನಟ್ಟಿ (ಚಿತ್ರದುರ್ಗ ಜಿಲ್ಲೆ).
ಮೊಬೈಲ್ : 98455 11095



36

ಆಗ ತಕ್ಷನು ಕಾಣಿಸಿಕೊಂಡು: 'ವೃತ್ರನೇ ನೀನು ಸಾಯಲೇಬೇಕು. ಇಂದ್ರನ ಪರವಾಗಿ ನಾನು ವಜ್ರಾಯುಧವನ್ನು ಅಭಿಮಂತ್ರಿಸುತ್ತಿದ್ದೇನೆ. ಲೋಕರಕ್ಷಣೆಗಾಗಿ ಈ ಸಾವು ಅತ್ಯಾವಶ್ಯಕ. ಇದು ನಿನ್ನ ತಂದೆ ತ್ವಷ್ಟಬ್ರಹ್ಮನ ಆಣತಿ' ಎಂದು ಹೇಳಿದ.

'ಅಯ್ಯಾ ತಕ್ಷಕ, ನಿನ್ನ ಪಾತ್ರ ನನ್ನ ವಿಷಯ ಭೋಗಗಳಾಲಸೆಯನ್ನು ಮಾತ್ರವೇ ಕತ್ತರಿಸುತ್ತದೆ. ಅದ್ದರಿಂದ ನಾನು ಈ ಕಾಯವನ್ನು ತೊರೆದು ಮುನಿಜನರಿಗೆ ಉಚಿತವಾಗಿರುವ ಸ್ಥಿತಿಯನ್ನು ಪಡೆದುಕೊಳ್ಳುತ್ತೇನೆ' ಎಂದು ವೃತ್ರನು ಬ್ರಹ್ಮ ಜ್ಞಾನಿಯಂತೆ ಹೇಳಿದ.

ಮೊಬೈಲ್ : 90081 85893



37

ವೃತ್ರನು ತೋಳನ್ನು ಬಲವಾಗಿ ಬಡಿದ. ಇಂದ್ರ, ಐರಾವತ ಮತ್ತು ತಕ್ಷಕ ಎಲ್ಲರೂ ಗಾಳಿಯಲ್ಲಿ ಹಾರಿ ದೂರದಲ್ಲಿ ಬಿದ್ದರು. ವೃತ್ರನೇ ಈ ಯುದ್ಧದಲ್ಲಿ ಗೆಲ್ಲುತ್ತಾನೆ ಎನಿಸುವಂತಿತ್ತು ಆ ದೃಶ್ಯ

ಚಿತ್ರಪಟ ಶಿಲ್ಪಿ : ಶ್ರೀ ಆರ್. ವಿಶ್ವನಾಥ, ಹುಲಿಓದರೆಡ್ಡಿಹಳ್ಳಿ, ಮುಳಬಾಗಿಲು ತಾ॥
ಮೊಬೈಲ್ : 99863 77308



38

'ಯುದ್ಧ ಎಂಬುದು ಗೆಲುವಿಗಾಗಿ ಮಾತ್ರವೇ ಇಲ್ಲ. ನಾನೇ ವೃತಘ್ನ ಎಂದು ನೀನು ಘೋಷಿಸುತ್ತಾ ವಜ್ರಾಯುಧವನ್ನು ಅಭಿಮಂತ್ರಿಸಲು ತಕ್ಷಕನಿಗೆ ಹೇಳು. ಜೀವಿಗಳ ಮುಖಾಂತರ ಜೀವಿಗಳನ್ನು ಸೃಷ್ಟಿಸುವವನೇ, ಜೀವಿಗಳ ಮುಖಾಂತರವಾಗಿಯೇ ಜೀವಿಗಳನ್ನು ಅಂತ್ಯಗೊಳಿಸುತ್ತಾನೆ. ಮಧುವಿದ್ಯೆಯನ್ನು ಪಠಿಸು. ನನ್ನ ಅಂತ್ಯವಾಗುತ್ತದೆ. ನಾವೆಲ್ಲಾ ಗೊಂಬೆಗಳು. ಸೂತ್ರಧಾರ ಬೇರೆಯೇ ಇದ್ದಾನೆ' ಎಂದು ವೃತ್ರ ಮಹಾಜ್ಞಾನಿಯಂತೆ ಇಂದ್ರನನ್ನು ಎಚ್ಚರಿಸಿದ. ತಕ್ಷಕನು ವಜ್ರ ಪ್ರಯೋಗಿಸಿದ. ಇಂದ್ರನು ವೃತಘ್ನನಾದ.



39

ವೃತ್ರ ನೆಲದ ಮೇಲೆ ಬಿದ್ದಾಗ ಮೇರು ಪರ್ವತವೇ ನೆಲದ ಮೇಲೆ ಬಿದ್ದಷ್ಟು ಸದ್ದಾಯಿತು. ಪ್ರಳಯವೇ ಬಂತೇನೋ ಎನ್ನುವಷ್ಟು ಹೆದರಿಕೆ ವಾತಾವರಣದಲ್ಲಿ ಮೂಡಿತು.

ಚಿತ್ರಪಟ ಶಿಲ್ಪಿ : ಶ್ರೀ ಕಮ್ಮಾರ ಹುಚ್ಚಪ್ಪ, ಸೋಗಿ ಗ್ರಾಮ, ಹೂವಿನಹಡಗಲಿ ತಾ.
ಮೊಬೈಲ್ : 99866 13948

40

ವಿಶ್ವರೂಪಾಚಾರ್ಯರ ವಧೆಯಿಂದ ಮೊದಲೇ ಇದ್ದ ಬ್ರಹ್ಮಹತ್ಯಾ [illegible] ವೃತ್ರ ಹತ್ಯೆಯ ಫಲವಾಗಿಯೂ ಇಂದ್ರನನ್ನು ಇನ್ನೊಂದು ಬ್ರಹ್ಮಹತ್ಯಾದೋಷವು ಆವರಿಸಿತು. ಇಂದ್ರ ಓಡಿದ. ಆದರೆ ಬ್ರಹ್ಮಹತ್ಯಾ ದೋಷಗಳು ಅವನ ಬೆನ್ನುಹಿಂದೆಯೇ [illegible]. ಇಂದ್ರನಿಗೆ ಎಲ್ಲಿಯೂ ತನ್ನನ್ನು ರಕ್ಷಿಸಿಕೊಳ್ಳಲು ಆಶ್ರಯ ಕಾಣಲಿಲ್ಲ.



42

ಕಮಲದ ನಾಳದಿಂದ ಹೊರಬರುತ್ತಲೇ ಬ್ರಹ್ಮ ಹತ್ಯಾಪಾತಕವು ಸರ್ಪ ರೂಪದಲ್ಲಿ ಇಂದ್ರನನ್ನು ಸುತ್ತುವರಿಯಿತು. ಪ್ರತಿ ಪಾಪಕ್ಕೂ ಏಳು ಸುತ್ತುಗಳಂತೆ ಹದಿನಾಲ್ಕು ಸುತ್ತುಗಳನ್ನು ಹಾಕಿ ಸರ್ಪವು ಪೂತ್ಕರಿಸಲು ಪ್ರಾರಂಭಿಸಿತು. ಇಂದ್ರನು ಈ ಪಾತಕದಿಂದ ಮುಕ್ತಿಗೊಳಿಸಬೇಕೆಂದು ಆರ್ತನಾಗಿ ಬೃಹಸ್ಪತಿಯನ್ನು ಪ್ರಾರ್ಥಿಸ ತೊಡಗಿದ.

ಚಿತ್ರಪಟ ಶಿಲ್ಪಿ : ಶ್ರೀ ಸಿ. ನಾಗೇಶ್, ವಿನಾಯಕನಗರ, ರಾಮನಗರ,
ಮೊಬೈಲ್ : 9902253855



43

ಸರ್ಪದಿಂದ ಬಂಧಿತನಾಗಿದ್ದುಕೊಂಡೇ ಬೃಹಸ್ಪತಿಯ ಆಚಾರ್ಯತ್ವದಲ್ಲಿ ಇಂದ್ರನು ವಿಶ್ವಕರ್ಮ ಯಜ್ಞವನ್ನು ಆಚರಿಸಿದ. ವಿಶ್ವಕರ್ಮ ಸೂಕ್ತದ ಒಂದೊಂದೇ ಮಂತ್ರವನ್ನು ಹೇಳುತ್ತಾ ಹವಿಸ್ಸುಗಳನ್ನು ಅರ್ಪಿಸಿದಂತೆಲ್ಲಾ ಸರ್ಪ ಒಂದೊಂದೇ ಸುತ್ತನ್ನು ಬಿಟ್ಟಿತು. ಇಂದ್ರನು ಬ್ರಹ್ಮಹತ್ಯಾ ಪಾತಕದಿಂದ ಮುಕ್ತನಾದ.

ಚಿತ್ರಪಟ ಶಿಲ್ಪಿ : ಶ್ರೀ ಎಂ. ಶರಣ್, ಸ್ವಸ್ತಿಶಿಲ್ಪ ಲೋಕ, ರಾಮನಗರ.
ಮೊಬೈಲ್ : 98440 21503



44

ಇಂದ್ರನಿಗೆ ಮತ್ತೆ ದೇವಲೋಕದ ಆಳ್ವಿಕೆ ದೊರೆಯಿತು.

ಈ ಅಖ್ಯಾಯಿಕೆಯು ಶ್ರೀಮದ್ಭಾಗವತದ ಆರನೇಯ ಸ್ಕಂದದಲ್ಲಿ 'ಮಹೇಂದ್ರ ಮೊಕ್ಷ' ಎಂಬ ಹೆಸರಿನಲ್ಲಿ ವಿವರಿತವಾಗಿದೆ. ಇದನ್ನು ಓದಿದವರಿಗೆ, ತಿಳಿದವರಿಗೆ ಧನ್ಯತೆ, ಯಶಸ್ಸು, ಸಕಲ ಪಾಪಗಳಿಂದ ಮುಕ್ತಿ, ಶತ್ರುಗಳ ಮೇಲೆ ವಿಜಯ, ಆರೋಗ್ಯ, ಆಯಸ್ಸುಗಳು ಲಭಿಸುತ್ತವೆ.

ಇದಂ ಮಹಾಖ್ಯಾನ ಮಶೇಷ ಪಾಪ್ಮನಂ ಪ್ರಕ್ಷಾಲನಂ ತೀರ್ಥಪದಾನು ಕೀರ್ತನಮ್ । ಭಕ್ತ್ಯುಚ್ಛ್ರಾಯಂ ಭಕ್ತಜನಾನು ವರ್ಣನಂ ಮಹೇಂದ್ರ ಮೋಕ್ಷಂ ವಿಜಯಂ ಮರುತ್ವತಃ ॥22॥
ಪಠೇಯುರಾಖ್ಯಾನಮಿದಂ ಸದಾ ಬುಧಃ ಶೃಣ್ವಂತ್ಯಥೋ ಪರ್ವಾಣಿ ಪರ್ವಾಣೀಂದ್ರಿಯಮ್ । ಧನ್ಯಂ ಯಶಸ್ಯಂ ನಿಖಿಲಘ ಮೋಚನಂ ರಿಪುಂಜಯಂ ಸ್ವಸ್ತ್ಯಯನಂ ತಥಾಽಽಯುಷಮ್ ॥23॥

– ಶ್ರೀ ಮದ್ಭಾಗವತಂ ಸ್ಕಂದ 6, ಅಧ್ಯಾಯ 13

ಚಿತ್ರಪಟ ಶಿಲ್ಪಿ : ಶ್ರೀ ಎಂ.ಆರ್ ವೀರಭದ್ರಾಚಾರ್ಯ ಮಾಗಡಿ ಮುಖ್ಯರಸ್ತೆ,
ಬೆಂಗಳೂರು, ಮೊಬೈಲ್ 95352 52009

# ಮಹೇಂದ್ರ ಮೋಕ್ಷ

– ಶ್ರೀಮತಿ ಸರಿತಾ ಜ್ಞಾನಾನಂದ

## 4 ಮಹೇಂದ್ರ ಮೋಕ್ಷ

### ಸೃಷ್ಟಿಕರ್ತ

ತುಂಬಾ ಹಿಂದೆ ಎಂದರೆ ಈ ಸೃಷ್ಟಿಯು ಕಾಣಿಸಿಕೊಳ್ಳುವುದಕ್ಕೆ ಮೊದಲು. ಈಗ ನಮ್ಮ ಕಣ್ಣಿಗೆ ಕಾಣಿಸುವದೆಲ್ಲಾ ನೀರಿನ ರೂಪದಲ್ಲಿ ವ್ಯಾಪಿಸಿಕೊಂಡಿತ್ತು. ಆ ಜಲತತ್ತ್ವದಲ್ಲಿ ಸೃಷ್ಟಿಕರ್ತನಾದ ವಿಶ್ವಕರ್ಮನು ನಿರಾಕಾರನಾಗಿ, ನಿರ್ಗುಣನಾಗಿದ್ದನು. ಆತನಲ್ಲಿ ತಾನು ಬಹುವಾಗಬೇಕು ಎಂಬ ಇಚ್ಛೆ ಮೂಡಿತು. ಇದರಿಂದ ನಿರಾಕಾರನಾಗಿದ್ದ ವಿಶ್ವಕರ್ಮನು ಸಾಕಾರ ರೂಪವನ್ನು ಪಡೆಯುವುದು ಅವಶ್ಯಕವಾಯಿತು. ಆ ಪರಮಾತ್ಮನು ಗಾಳಿಯ ರೂಪದಲ್ಲಿ ನೀರನ್ನು ಪ್ರವೇಶಿಸಿದನು. ಆಗ ನೀರಿನಲ್ಲಿ ಹುದುಗಿಕೊಂಡಿರುವ ಭೂಮಿಯನ್ನು ಗುರ್ತಿಸಿದ. ತಾನು ವ್ಯಾಪಾಕಗೊಳ್ಳಲು ಭೂಮಿಯನ್ನು ಉದ್ಧರಿಸುವುದು ಅನಿವಾರ್ಯ ಎಂದುಕೊಂಡು ವರಾಹದ ರೂಪವನ್ನು ಧರಿಸಿ ತನ್ನ ಕೋರೆಯ ಹಲ್ಲುಗಳ ಕೊನೆಗಳ ಮೇಲಿಂದ ಭೂಮಿಯನ್ನು ಎತ್ತಿಕೊಂಡು ಮೇಲಕ್ಕೆ ಬಂದ. ನಂತರ ತಾನು ಸಾಕಾರ ವಿಶ್ವಕರ್ಮನಾಗಿ ಭೂದೇವಿಯನ್ನು ಆಧಾರವಾಗುವಂತಹ ಭೂಮಿಯನ್ನಾಗಿ ಮಾಡಿದ. *ನೀರಿನಿಂದ ಬೇರ್ಪಡಿಸಿ ತೆಗೆದುದರಿಂದ ಭೂಮಿಗೆ ಪೃಥ್ವೀ ಎಂಬ ಹೆಸರು* ಬಂದಿದೆ. ವಿಶ್ವಕರ್ಮ ಪ್ರಜಾಪತಿಯು ಪೃಥಿವೀ ಭೂತದಲ್ಲಿ ಅಧಿವಾಸವನ್ನು ಏರ್ಪಡಿಸಿಕೊಂಡು ತಪಸ್ಸನ್ನು ಮಾಡಿದ. ಅದರ ಫಲವಾಗಿ ಅಷ್ಟವಸುಗಳು, ಏಕಾದಶ ರುದ್ರರು, ದ್ವಾದಶ ಆದಿತ್ಯರು ಸೃಷ್ಟಿಯಾದರು. ಅವರು ವಿಶ್ವಕರ್ಮನನ್ನು ಸೃಷ್ಟಿಮಾಡುವ ಮಾರ್ಗವನ್ನು ಹೇಳಿಕೊಡಲು ಪ್ರಾರ್ಥಿಸಿದರು. 'ಸೃಷ್ಟಿ ಸಾಮರ್ಥ್ಯಕ್ಕಾಗಿ ನೀವೆಲ್ಲರೂ ತಪಸ್ಸು ಮಾಡಿ. ಇದಕ್ಕೆ ಆಧಾರವಾದುದು ಯಜ್ಞಕರ್ಮ' ಎಂದು ಅವರಿಗೆ ಯಜ್ಞದೀಕ್ಷೆಯನ್ನು ಕೊಟ್ಟ. ಆ ದೇವತೆಗಳೆಲ್ಲರೂ ವಿಶ್ವಕರ್ಮನ ಆಣತಿಯಂತೆ ಸೃಷ್ಟಿಯನ್ನು ಕೈಗೊಂಡರು. ದೇವಾಸುರ ಮಾನವಾದಿಗಳೆಲ್ಲಾ ಅವರಿಂದಲೇ ಸೃಷ್ಟರಾದರು ಎಂದು ಯಜುರ್ವೇದವು ಹೇಳಿದೆ.

ಎಂಟು (ಅಷ್ಟ) ವಸ್ತುಗಳಲ್ಲಿ, ಹನ್ನೊಂದು (ಏಕಾದಶ) ರುದ್ರರಲ್ಲಿ, ಹನ್ನೆರಡು (ದ್ವಾದಶ) ಆದಿತ್ಯದಲ್ಲಿ ಒಬ್ಬೊಬ್ಬ ತ್ವಷ್ಟೃ ಇದ್ದಾನೆ. ಅದೇ ಅಲ್ಲದೆ ಇಪ್ಪತ್ತೇಳು (ಸಪ್ತ ವಿಂಶತಿ) ನಕ್ಷತ್ರಗಳಲ್ಲೂ ಒಬ್ಬ ತ್ವಷ್ಟೃ ಇದ್ದಾನೆ. ಇವರಿಂದಲೇ ಸೃಷ್ಟಿಯು ವ್ಯಾಪಕಗೊಂಡಿತು. ಇವರೆಲ್ಲರೂ ಬ್ರಾಹ್ಮಣರ ಪಿತೃ, ಪಿತಾಮಹ, ಪ್ರಪಿತಾಮಹರೆಂದು ಪ್ರಖ್ಯಾತರಾಗಿದ್ದಾರೆ. ಇವರೆಲ್ಲರೂ ವಿಶ್ವಕರ್ಮನ ಮಕ್ಕಳು ಮತ್ತು ಶಿಷ್ಯರು ಎಂಬುದಾಗಿ ಪ್ರಖ್ಯಾತರಾಗಿದ್ದಾರೆ.

ವಿಶ್ವಬ್ರಾಹ್ಮಣ ಪರಂಪರೆಯಲ್ಲಿ ತ್ವಷ್ಟೃವು ಬ್ರಹ್ಮನಾಗಿದ್ದು, ಆತನು ನೇರವಾಗಿ ಸಗುಣ ಪಂಚಮುಖ ವಿಶ್ವಕರ್ಮನ ಪಶ್ಚಿಮ ದಿಕ್ಕಿಗೆ ಎದುರಾಗಿದ್ದ ಅಘೋರ ಮುಖದಿಂದ ಮೂಡಿಬಂದವನು ಎಂದು ಹೇಳುತ್ತಾರೆ. ಆದ್ದರಿಂದ ತ್ವಷ್ಟೃ ಎಂಬುದು ವಿಶ್ವಕರ್ಮನಿಗೆ ಪರ್ಯಾಯಪದ ಎಂದೂ ಹೇಳುತ್ತಾರೆ.

ತುಂಬಾ ಹಿಂದೆ ಎಂದರೆ ನಮಗೆ ಆ ಕಾಲದ ಅಂದಾಜು ಕಲ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪಾರಂಪರಿಕ ಇತಿಹಾಸದಲ್ಲಿ ಜಲಪ್ರಳಯದ ನಂತರ ಪುನರ್ ಸೃಷ್ಟಿ ಪ್ರಾರಂಭವಾದದ್ದು ಮನುವಿನಕಾಲದಲ್ಲಿ ಎಂದರೆ ಇಂದಿಗೆ ಎಂಟು ಸಾವಿರದ ಏಳು ನೂರು ವರ್ಷಗಳ ಹಿಂದೆ ಇದು ನಡೆದದ್ದು. ಇನ್ನೂ ಮೊದಲು ಎಂದು ಕೊಂಡರೂ ಒಂಬತ್ತು ಸಾವಿರ ವರ್ಷಗಳಾದರೂ ಆಗಿರಬೇಕು. ಈ ರೀತಿ ಕಾಲವನ್ನು ಲೆಕ್ಕಿಸಲು ಆಧಾರವಿದೆ. ರಘು ಕುಲದ ಪ್ರಾರಂಭವಾದುದು ಮನುವಿನಿಂದ. ಇದರ ಕೊನೆಯ ಅರಸನ ತನಕ ಒಂದು ನೂರು ತಲೆಮಾರುಗಳ ಲೆಕ್ಕ ನಮ್ಮ ಪುರಾಣಗಳಲ್ಲಿವೆ. ಇದರ ಆಧಾರದಿಂದ ಭಾರತ ಪಾರಂಪರಿಕ ಇತಿಹಾಸವನ್ನು ಕೆಲವು ವಿದ್ವಾಂಸರು ಲೆಕ್ಕಿಸಿದ್ದಾರೆ. ಅದರ ಪ್ರಕಾರವೇ ಪ್ರಸ್ತುತ ಕಾಲಮಾನವನ್ನು ಹೇಳುತ್ತಿದ್ದೇವೆ.

ಮನುಕುಲದ ಬಹು ಪ್ರಾಚೀನ ಗ್ರಂಥವೆಂದರೆ ಋಗ್ವೇದ. ಅದರ ವಯಸ್ಸು ಪಾಶ್ಚಾತ್ಯ ವಿದ್ವಾಂಸರ ಅನುಸಾರ ಐದು ಸಾವಿರ ವರ್ಷಗಳು. ಆದ್ದರಿಂದ ಋಗ್ವೇದವು ರೂಪುಗೊಳ್ಳುತ್ತಿದ್ದ ಕಾಲದಲ್ಲಿಯೇ ಈ ತ್ವಷ್ಟೃ ಬ್ರಹ್ಮ ಇದ್ದ ಎಂದು ನಾವು ನಂಬಬಹುದು. ಆ ಕಾಲಕ್ಕೆ ರಾಮಾಯಣದಲ್ಲಿ ಹೇಳುವ ರಘುವಂಶದ ಮೂಲ ಪುರುಷನಾದ ಮನುವಿಗೂ ಮೂರು ನೂರು ವರ್ಷಗಳ ಹಿಂದೆ, ಎಂದರೆ ಸತ್ಯಯುಗದ ಕಾಲ, ಋಗ್ವೇದ ಸಂಹಿತೆಯು ಆ ಕಾಲದಲ್ಲಿ ಇನ್ನೂ ಪ್ರಾರಂಭ ಘಟ್ಟದಲ್ಲಿತ್ತು. ವೈದಿಕ ಆಚಾರ ಮತ್ತು ಸಂಸ್ಕೃತಿಯು ರೂಪುಗೊಳ್ಳುತ್ತಿದ್ದ ಕಾಲ ಅದು.

ವೈದಿಕ ಸಾಹಿತ್ಯ, ಆಚಾರ, ಸಂಸ್ಕೃತಿಯನ್ನು ನಿರ್ಮಿಸಿದ ಋಷಿಗಳು ಹಲವರಿದ್ದಾರೆ. ಅವರಲ್ಲಿ ತ್ವಷ್ಟೃ ಬ್ರಹ್ಮನೂ ಒಬ್ಬ. ಈತನು ಜಗತ್ ಸೃಷ್ಟಿಕರ್ತನಾದ ವಿಶ್ವಕರ್ಮನಿಗೆ ಸಮನಾದವನು ಎಂಬ ಹೆಸರನ್ನು, ಪ್ರಖ್ಯಾತಿಯನ್ನು ಪಡೆದಿದ್ದ. ಈತನನ್ನು ಪ್ರಜಾಪತಿ ಎಂದು ಕರೆಯುತ್ತಿದ್ದರು. ಹಾಗೆಂದರೆ ಮನುಷ್ಯರನ್ನು ಸೃಷ್ಟಿಸುವಂತಹ ಬ್ರಹ್ಮ. ಗೃಹಸ್ಥ ಧರ್ಮವನ್ನು ರೂಪಿಸಿದವನು ಈತನೇ ಎಂದು ವೇದಗಳಲ್ಲಿ ಹೇಳಿದೆ. 'ತ್ವಷ್ಟೃ ಪ್ರಜಾಪತಿಯು ಈ ಹೆಣ್ಣನ್ನು ನಿನ್ನ ಹೆಂಡತಿಯಾಗಲು

ಇತರರು ಇಂತಹ ಮಗ ನಮಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಇತರರು ಕರುಬುವಂತಹ ಸಫಲ ಮಕ್ಕಳನ್ನೂ ಕೊಡಬಲ್ಲವ' ಎಂದು ವಿವರಿಸುತ್ತದೆ.

ಇದರಿಂದ ಸ್ಪಷ್ಟವಾಗುವ ಅಂಶವೆಂದರೆ ತ್ವಷ್ಟ ಬ್ರಹ್ಮನು ಸೃಷ್ಟಿಕರ್ತರಲ್ಲಿ ಒಬ್ಬ. ಗೃಹಾಸ್ಥಶ್ರಮ ಧರ್ಮಕ್ಕೆ ಮೂಲವಾದ ಮಾಂಗಲ್ಯ ಬಂಧವನ್ನು, ಸತಿ – ಪತಿ ಬಾಂಧವ್ಯವನ್ನು ಧರ್ಮ ಬದ್ಧಗೊಳಸಿದವನು. ಆದ್ದರಿಂದ ಪಾತಿವ್ರತ್ಯವನ್ನು ಹೆಣ್ಣಿಗೆ ತಂದುಕೊಟ್ಟು ಆಕೆಯನ್ನು ಮುತ್ತೈದೆಯ ಸ್ಥಾನಕ್ಕೆ ಅರ್ಹಳನ್ನಾಗಿ ಮಾಡಿದವನು. ಈತನು ಬ್ರಹ್ಮ ಎಂದು ಖ್ಯಾತನಾಗಿದ್ದ. ಈತನಿಗೆ ನಾಲ್ಕು ಮುಖಗಳು, ನಾಲ್ಕು ತೋಳುಗಳು ಇದ್ದವು. ಯಜ್ಞವನ್ನು ಪ್ರಾರಂಭಿಸಿ ರೂಢಿಸಿಕೊಟ್ಟವರಲ್ಲಿ ಈತನೂ ಮೊದಲಿಗನೇ. ಈತನ ಯಜ್ಞಪಾತ್ರಾ ನಿರ್ಮಾಣ ಕೌಶಲ್ಯವನ್ನು ವೇದದಲ್ಲಿ ಬಹುವಾಗಿ ಪ್ರಶಂಸಿಸಲಾಗಿದೆ. ಚಮಸ ಎಂಬುದು ಮರದ ಪಾತ್ರೆ, ಇದನ್ನು ಯಜ್ಞ ಕಾಲದಲ್ಲಿ ಸೋಮರಸವನ್ನು ಸಂಗ್ರಹಿಸಿ ಇಡಲು, ಇದರಿಂದ ಸೋಮರಸವನ್ನು ಕುಡಿಯಲು ಬಳಸುತ್ತಾರೆ. ಈತನು ನಿರ್ಮಿಸಿಕೊಟ್ಟ ಚಮಸ ಪಾತ್ರೆಯಿಂದ ಇತರ ದೇವತೆಗಳೆಲ್ಲಾ ಸೋಮಪಾನವನ್ನು ಮಾಡುತ್ತಿದ್ದರು. ಇದನ್ನು ನಿರ್ಮಿಸಲು ಬಳಸುತ್ತಿದ್ದ ಬಾಚಿಯೇ ಈತನು ಧರಿಸಿರುವ ಆಯುಧಗಳಲ್ಲಿ ಒಂದು. ಯಜ್ಞವನ್ನು ನಿರ್ವಹಿಸಲು ಸೃಕ್ – ಸ್ರುವಗಳು ಅತ್ಯಾವಶ್ಯಕ. ಆದ್ದರಿಂದ ಅವೂ ಈತನು ಧರಿಸಿರುವ ಆಯುಧಗಳೇ. ಹೀಗೆ ಯಜ್ಞಾಂಗದ ಆಯುಧಗಳನ್ನು, ತಾಮ್ರ–ಕಂಚಿನ ಪಾತ್ರೆಗಳನ್ನು ಈತನೇ ನಿರ್ಮಿಸಿಕೊಟ್ಟು ಕಾಂಸ್ಯ ಶಿಲ್ಪದ ಜನಕನಾಗಿದ್ದಾನೆ.

ವೈಷ್ಣವ ಸಂಹಿತೆಗಳಲ್ಲಿ **ಪ್ರಜಾಪತಿ ಪಟ್ಟ** ಅಥವಾ **ಬ್ರಹ್ಮಪಟ್ಟ** ಎಂದು ಕರೆಯಲ್ಪಡುವ ಆರು ಮಂದಿ ಪ್ರಜಾಪತಿಗಳ (ಬ್ರಹ್ಮರು) ಉಲ್ಲೇಖವಿದೆ. ಅವರು ಮನು, ತ್ವಷ್ಟ, ಭೌವನ, ಅರ್ಕ, ಮಯ ಮತ್ತು ಇಂದ್ರ. ಇವರೆಲ್ಲರ ಸಾಮಾನ್ಯ ರೂಪ ಇಂತಿದೆ : ನಾಲ್ಕು ಭುಜಗಳು, ಒಂದೇ ತಲೆ, ಇವರ ವಾಹನ ಹಂಸ. ಮೇಲಿನ ಬಲಹಸ್ತದಲ್ಲಿ ಅಕ್ಷಮಾಲೆ, ಎಡಹಸ್ತದಲ್ಲಿ ದಂಡ ಧರಿಸಿರುತ್ತಾರೆ. ಮುಂದಿನ ಹಸ್ತಗಳಲ್ಲಿ ಅಭಯ ಮತ್ತು ವರದ ಮುದ್ರೆಗಳನ್ನು ಧರಿಸಿರುತ್ತಾರೆ. ಇವರಲ್ಲಿ ತ್ವಷ್ಟ ಪ್ರಜಾಪತಿಯ ಮೈಬಣ್ಣ ಕೆಂಪು. ಕರಂಡ ಮಕುಟ ಧರಿಸಿದ್ದು ವೃಷಭ ಧ್ವಜವಿರುತ್ತದೆ. ಇವರೆಲ್ಲರೂ ವಿಶ್ವಕರ್ಮವಂಶ ಪರಂಪರೆಯವರು.

ಇಂದ್ರನನ್ನು ತ್ವಷ್ಟವಿನ ಮಗ ಎಂದು ವೇದದಲ್ಲಿಯೇ ಹಲವು ಕಡೆ ಹೇಳಿರುವುದರಿಂದ ಈ ದೇವನ ಪ್ರಾಚೀನತೆ ಮತ್ತು ಪ್ರಭಾವಗಳನ್ನು ನಾವು ಕಲ್ಪಿಸಿಕೊಳ್ಳಬಹುದು. ತ್ವಷ್ಟ ಬಹು ಪ್ರಖ್ಯಾತನಾದ ಪ್ರಜಾಪತಿಯಾಗಿದ್ದ. ಈತನ ಶಿಲ್ಪ ಕೌಶಲವೂ ಅಷ್ಟೇ ಪ್ರಖ್ಯಾತ. ಸಕಲ ರೂಪಗಳಿಗೆ ಅಧಿಪತಿ ಎಂದು, ಸಕಲ ರೂಪ ನಿರ್ಮಾಣ ಮಾಡುವವನು ಎಂಬ ಸ್ತುತಿಗಳೂ ವೇದದಲ್ಲಿ ಉಂಟು. ಗರ್ಭದಲ್ಲಿರುವ ಪಿಂಡಕ್ಕೆ ಅಂಗಾಂಗಗಳನ್ನು ಕಲ್ಪಿಸಿ ರೂಪವನ್ನು ಕೊಡುವ ದೇವನು ತ್ವಷ್ಟವೆಂದು ವೇದದಲ್ಲಿ ಹೇಳಿದೆ.

ಇಂತಹ ತ್ವಷ್ಟಬ್ರಹ್ಮನ ದೇವಿಯನ್ನು ಇಚ್ಛಾಶಕ್ತಿ ಎಂದು, ಸಾವಿತ್ರೀದೇವಿ ಎಂದೂ ಶಾಸ್ತ್ರಗಳಲ್ಲಿ ಹೇಳಿದೆಯಾದರೂ ಶಿಲ್ಪಿ ಬ್ರಾಹ್ಮಣರ ಗೋತ್ರ–ಪ್ರವರಗಳನ್ನು ವಿವರಿಸಿರುವ ಬ್ರಹ್ಮಾಂಡ ಪುರಾಣದಲ್ಲಿ ಈತನ ಪತ್ನಿಯ ಹೆಸರನ್ನು ವೈರೊಚನೀ ಯಶೋಧರಾ ಎಂದು ಹೇಳಲಾಗಿದೆ. ಈಕೆಯನ್ನು ರಚನಾ ಎಂದೂ ಕರೆದಿರುವುದುಂಟು. ಹೀಗೆ ಹೇಳುವಾಗ ಈತನನ್ನು ಭೃಗುವಂಶದ ಅಘೋರ ಋಷಿಯ ಮಗನೆಂದು ಗುರುತಿಸಿ ಹೇಳಲಾಗಿದೆ. ಈ ಹೆಸರು ವ್ಯಾಪಕವಾಗಿ ಪುರಾಣ ಮತ್ತು ಇತರ ಆಕರಗಳಲ್ಲಿ ಹೇಳಿದೆ. ಇದರಿಂದ ಈತನ ಕಾಲವು ಒಂದು ಸಾವಿರ *ವರ್ಷಗಳಷ್ಟು ಕಡಿಮೆಯಾದಂತಾಗುತ್ತದೆ.*

### ವಿವಸ್ವನ್ ವಿವಾಹ

ಒಂದಂಶವು ಖಚಿತ. ಬ್ರಹ್ಮನ ಹೆಂಡತಿಯನ್ನು ಸಾವಿತ್ರಿ – ಸರಸ್ವತಿ – ಗಾಯತ್ರೀ ಎಂದು ಮೂರು ಹೆಸರುಗಳಿಂದ ಕರೆಯುತ್ತಾರೆ. ಈಕೆಯ ಸ್ವರೂಪವು ಹೆಸರಿನೊಂದಿಗೆ ಬದಲಾಗುತ್ತದೆ ಎಂಬುದನ್ನು ಗಮನಿಸಬೇಕು. ಈ ವಿವರಗಳ ಗೊಂದಲ ಏನೇ ಇರಲಿ ತ್ವಷ್ಟ ಬ್ರಹ್ಮನಿಗೂ ಒಬ್ಬ ಹೆಂಡತಿ ಇದ್ದಳು. ಆಕೆಗೆ ಸಂಜ್ಞಾ ಎಂಬ ಹೆಣ್ಣು, ವಿಶ್ವರೂಪ ಮತ್ತು ವಿಶ್ವಕರ್ಮ ಎಂಬ ಇಬ್ಬರು ಗಂಡು ಮಕ್ಕಳು ಇದ್ದರು. ಇವರಲ್ಲಿ ವಿಶ್ವರೂಪಾಚಾರ್ಯನಿಗೆ ಮೂರು ತಲೆಗಳಿದ್ದುದರಿಂದ ಈತನನ್ನು ತ್ರಿಶಿರಸ್ ಎಂಬ ಹೆಸರಿನಿಂದಲೂ ಕರೆಯುತ್ತಿದ್ದರು. ಕೆಲವು ಪುರಾಣಗಳಲ್ಲಿ ತ್ರಿಶಿರಸ್ ವಿಶ್ವರೂಪಾಚಾರ್ಯನ ಸೋದರ ಎಂದು ಹೇಳಿದರೂ ಆತನ ಬಗ್ಗೆ ಬೇರೇನೂ ವಿವರಗಳನ್ನು ಹೇಳುವುದಿಲ್ಲ. ತ್ರಿಶಿರಸ್ ಬಗ್ಗೆ ಹೆಚ್ಚಿನ ವಿವರಗಳನ್ನೂ ಹೇಳಿಲ್ಲ. ಆದ್ದರಿಂದ ತ್ರಿಶಿರಸ್ ಎಂಬುದು ವಿಶ್ವರೂಪಾಚಾರ್ಯನಿಗೇ ಅನ್ವಯವಾಗುವ ಇನ್ನೊಂದು ಹೆಸರು ಎಂದರೆ ತಪ್ಪಲ್ಲ.

ಸೂರ್ಯಾರಾಧಕರು ನಿತ್ಯವೂ ಸೂರ್ಯೋದಯ ಸಮಯದಲ್ಲಿ **ಆದಿತ್ಯ ಹೃದಯ** ವನ್ನು ಪಠಿಸುತ್ತಾ ಸೂರ್ಯನನ್ನು ಪೂಜಿಸುವುದು ಈಗಲೂ ವಾಡಿಕೆಯಲ್ಲಿರುವ ಪದ್ಧತಿಯೇ. ಆಯಾ ಮಾಸಕ್ಕೆ ಅನುಗುಣವಾಗಿ ಹನ್ನೆರಡು ಮಂದಿ ಆದಿತ್ಯರನ್ನು ಆರಾಧಿಸುತ್ತಾರೆ. ಇವರೆಲ್ಲರೂ ಕಶ್ಯಪ ಪ್ರಜಾಪತಿಯ ಮಕ್ಕಳು. ಆದಿತ್ಯನು ಈ ಹನ್ನೆರಡೂ ರೂಪಗಳನ್ನು ಒಂದಾಗಿ ಸೇರಿಸಿಕೊಂಡಿರುವ ಸೃಷ್ಟಿಕರ್ತನ ಪ್ರತಿಬಿಂಬ. ಈ ಜಗತ್ತಿನ ಜೀವವನ್ನು ನಿಯಂತ್ರಿಸುತ್ತಿರುವ ಋತಶಕ್ತಿ. ಆಯಾ ತಿಂಗಳಿಗೆ ಅನುಗುಣವಾಗಿ ಆದಿತ್ಯನ ರೂಪವನ್ನು ಕಲ್ಪಿಸಿಕೊಂಡು ಆರಾಧಿಸುವುದು ಆದಿತ್ಯನ ಭಕ್ತರಿಗೆ ಪ್ರಿಯವಾದದ್ದು. ಅದರ ಪ್ರಕಾರ ಚೈತ್ರಮಾಸಲ್ಲಿ ಚಿತ್ತಾ ನಕ್ಷತ್ರಾಧಿಪನಾದ ತ್ವಷ್ಟವಿಶ್ವಕರ್ಮನ ಪೋಷಣ ಸ್ವರೂಪವು ವಿಷ್ಣುರೂಪದಲ್ಲಿ ಆರಾಧಿಸಲ್ಪಡುತ್ತಿದೆ. ಈತನು ಹನ್ನೆರಡು ಮಂದಿ ಆದಿತ್ಯರಲ್ಲಿ ಒಬ್ಬ. ನಂತರ ವೈಶಾಖದಲ್ಲಿ ಅರ್ಯಮನೆಂದು, ಜ್ಯೇಷ್ಠದಲ್ಲಿ ವಿವಸ್ವನ್ ಎಂದು, ಆಷಾಢದಲ್ಲಿ ಅಂಶುಮತ್ ಎಂದು, ಶ್ರಾವಣದಲ್ಲಿ ಮಾರ್ತಾಂಡನೆಂದು, ಭಾದ್ರಪದದಲ್ಲಿ ವರುಣನೆಂದು, ಆಶ್ವಯುಜದಲ್ಲಿ ಇಂದ್ರನೆಂದು, ಕಾರ್ತೀಕದಲ್ಲಿ ದಕ್ಷನೆಂದು, ಮಾರ್ಗಶೀರ್ಷದಲ್ಲಿ ಮಿತ್ರನೆಂದು, ಪುಷ್ಯದಲ್ಲಿ ಪೂಷನ್ ಎಂದು, ಮಾಘದಲ್ಲಿ

ಭಗನೆಂದು, ಫಾಲ್ಗುಣದಲ್ಲಿ ತ್ವಷ್ಟ್ರುವೆಂದು ಧ್ಯಾನಿಸಲ್ಪಡುತ್ತಾನೆ. ಈ ದ್ವಾದಶ ಆದಿತ್ಯರ ಸ್ಮರಣೆ ಪೂಜೆಯನ್ನು ಬಹು ವ್ಯವಸ್ಥಿತವಾಗಿ ಇಂದೂ ಸೂರ್ಯಾರಾಧಕರು ನಡೆಸುತ್ತಿದ್ದಾರೆ. ಇವರೆಲ್ಲರೂ ಕಶ್ಯಪನ ಮಕ್ಕಳೆಂದು ಹೇಳುವುದರಿಂದ ಆದಿತ್ಯರು ಕಾಶ್ಯಪರೆಂದೇ ಹೆಸರಾಗಿದ್ದಾರೆ.

ಇವರಲ್ಲಿ ವಿವಸ್ವನ್‌ಗೆ ಸಂಜ್ಞಾದೇವಿಯನ್ನು ಪತ್ನಿಯನ್ನಾಗಿ ತಂದುಕೊಳ್ಳಬೇಕೆಂದು ಕಶ್ಯಪ ಬ್ರಹ್ಮನು ಯೋಚಿಸಿದ. ಈ ವಿಷಯವನ್ನು ತ್ವಷ್ಟ್ರುಬ್ರಹ್ಮನ ಮುಂದೆ ಇರಿಸಿದ. ಈ ಸಂಬಂಧಕ್ಕೆ ಯಾವ ಅಡ್ಡಿಯೂ ಅವರಿಗೆ ಕಾಣಿಸಲಿಲ್ಲ. ಮಗಳೂ ತಂದೆಯ ಮಾತಿಗೆ ವಿರೋಧ ಹೇಳಲಿಲ್ಲ.

ವಿವಸ್ವನ್ ಮತ್ತು ಸಂಜ್ಞಾದೇವಿಯರ ಮದುವೆ ನಡೆಯಿತು. ಕಶ್ಯಪ ಮತ್ತು ತ್ವಷ್ಟ್ರು ಇಬ್ಬರೂ ಪ್ರಜಾಪತಿಗಳು. ಪ್ರಖ್ಯಾತರು. ಬಹುಪ್ರಭಾವ ಶಾಲಿಗಳು. ಇನ್ನು ಅವರಿಬ್ಬರ ಮಧ್ಯೆ ಸಂಬಂಧವನ್ನು ಬೆಸೆಯುವ ಈ ವಿವಾಹವು ಬಹು ವಿಜೃಂಭಣೆಯಿಂದಲೇ ನಡೆಯಿತು. ಆ ಕಾಲದ ಗಣ್ಯರೆಲ್ಲರೂ ಬಂದು ಮದುಮಕ್ಕಳನ್ನು ಹರಸಿದರು. ಪದ್ಧತಿಯಂತೆ ಮದುಮಗಳು ಅತ್ತೆಯ ಮನೆಯನ್ನು ಸೇರಿದಳು.

ಇಬ್ಬರೂ ಪರಸ್ಪರ ಅನುರಾಗದಿಂದ ಸಂತೋಷವಾಗಿಯೇ ಇದ್ದರು. ನಿಯಮಾನುಸಾರ, ಕ್ರಮ ತಪ್ಪದೆ, ಕರ್ತವ್ಯನಿಷ್ಠನಾಗಿ, ಬಿಡುವಿಲ್ಲದೆ ದುಡಿಯುವ ಗಂಡ, ಆತನ ಆರೈಕೆ. ಅದರಲ್ಲೂ ಕ್ರಮವನ್ನು ಸ್ವಲ್ಪವೂ ತಪ್ಪುವಂತಿಲ್ಲ. ಕಾಲಾನುಕ್ರಮದಲ್ಲಿ ಯಮಧರ್ಮ ಮತ್ತು ಮನು ವೈವಸ್ವತ ಎಂಬ ಇಬ್ಬರು ಗಂಡು ಮಕ್ಕಳು ವಿಷ್ಟಿ ಎಂಬ ಹೆಣ್ಣು ಮಗು ಆದವು. ವಿಷ್ಟಿಗೆ ಯಮುನಾ ಎಂಬ ಪರ್ಯಾಯ ನಾಮವಿದೆ. ಈಕೆಯು ಯಮನೊಂದಿಗೇ ಹುಟ್ಟಿದ ಅವಳಿ ಎಂದೂ ಕೆಲವು ಆಕರಗಳಲ್ಲಿ ಹೇಳಿದೆ.

ಇವರ ದಾಂಪತ್ಯ ಸುಖವಾಗಿತ್ತಾದರೂ ಒಂದೇ ಅಸಹನೀಯವಾಗಿದ್ದ ಅಂಶ–ಆದಿತ್ಯನ ತೇಜಸ್ಸು. ಎಷ್ಟೇ ಪ್ರಯತ್ನಿಸಿದರೂ ಸಹಿಸಲು ಸಾಧ್ಯವಾಗುತ್ತಿರಲಿಲ್ಲ. ಕೊನೆಗೆ ಸಂಜ್ಞಾದೇವಿಯು ಈ ವಿಷಯವನ್ನು ತಂದೆಯಲ್ಲಿ ಅರಿಕೆ ಮಾಡಿಕೊಂಡು ಯಾವುದಾದರೂ ಒಂದು ವಿಧಾನದಿಂದ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಬೇಕು ಎಂದು ಕೊಂಡಳು. ಸಮಸ್ಯೆಯನ್ನು ಗೌಪ್ಯವಾಗಿ ತಂದೆಗೆ ತಿಳಿಸಲು ತಾನು ತೌರಿಗೆ ಹೋಗಬೇಕಲ್ಲಾ? ಈಗಿನ ಸಂದರ್ಭ ಅದಕ್ಕೆ ಅನುಕೂಲವಾಗಿರಲಿಲ್ಲ. ಗಂಡನ ಪರಿಚರ್ಯೆಯನ್ನು ತಪ್ಪಿಸುವುದು ಸಾಧ್ಯವಿರಲಿಲ್ಲ. ಹೆಂಡತಿಯನ್ನು ತೌರಿಗೆ ಕಳುಹಿಸುವುದು ಎಂದರೆ ಗಂಡನಿಗೆ ಇಷ್ಟವಾದ ವಿಷಯವಲ್ಲ ಎಂಬುದನ್ನು ಈ ಹಿಂದಿನ ಸಂದರ್ಭಗಳಲ್ಲಿ ಸಂಜ್ಞಾ ಅನುಭವ ಪೂರ್ವಕವಾಗಿ ಅರಿತುಕೊಂಡಿದ್ದಳು. ಆದ್ದರಿಂದ ಬೇರೊಂದು ಹಾದಿ ಕಂಡುಕೊಳ್ಳಬೇಕು ಎಂದು ತೀರ್ಮಾನಿಸಿದಳು.

ತನ್ನ ಛಾಯೆಗೆ ಪ್ರಾಣವನ್ನು ಎರೆದಳು. ಮಕ್ಕಳನ್ನು – ಗಂಡನನ್ನು ಕ್ರಮ ತಪ್ಪಿಸದಂತೆ ಸೇವಿಸಬೇಕೆಂದು ಅಪ್ಪಣೆ ಮಾಡಿ ತಾನು ತೌರಿನತ್ತ ನಡೆದಳು.

ಮಗಳನ್ನು ಇದ್ದಕ್ಕಿದ್ದಂತೆಯೇ ಒಂಟಿಯಾಗಿ ಕಂಡ ತಂದೆಗೆ ಕಸಿವಿಸಿಯಾಯಿತು. ಯೌವನದಲ್ಲಿರುವ ದಂಪತಿಗಳಲ್ಲಿ ಯಾವ ತೆರನಾದ ಮನಸ್ತಾಪ ಬಂದಿದೆಯೋ ಎಂಬ ಅನುಮಾನ ತಲೆ ಎತ್ತಿತು. "ಕೊಟ್ಟ ಹೆಣ್ಣು ಕುಲಕ್ಕೆ ಹೊರತು ಎಂಬ ಮಾತು ಕೇಳಿಲ್ಲವೇ? ನೀನು ಒಬ್ಬಳೇ ತೌರಿಗೆ ಬಂದುದು ಸರಿಯಲ್ಲ. ಇದು ಹೆಣ್ಣಿನ ಬಾಳಿನಲ್ಲಿ ಕಳಂಕವಾಗಿ ಉಳಿಯುತ್ತದೆ. ಯಾವಾಗಲು ಗಂಡನೊಂದಿಗೆ ತೌರಿಗೆ ಬರುವುದೇ ಕ್ಷೇಮ ಮತ್ತು ಗೌರವಪ್ರದವಾದ ಕೆಲಸ" ಎಂದು ಹೇಳಿದ ತ್ವಷ್ಟ್ರು ಬ್ರಹ್ಮ.

"ಪರಿಸ್ಥಿತಿಯು ಅದಕ್ಕೆ ಅವಕಾಶ ಕೊಡಲಿಲ್ಲ. ಅದಕ್ಕೆ ಹೀಗೆ ಬರಬೇಕಾಯಿತು" ಎಂದಳು ಸಂಜ್ಞಾ ತನ್ನ ತೊಂದರೆಯನ್ನು ಮರೆಮಾಚುತ್ತಾ.

ತ್ವಷ್ಟ್ರುವಿಗೆ ಈ ವಾದವು ಕೋಪವನ್ನು ತರಿಸಿತು. "ಗಂಡನ ಮನೆಗೆ ಹಿಂತಿರುಗಿ ಹೋಗಿ ಮತ್ತೆ ಗಂಡನನ್ನು ಕರೆದುಕೊಂಡು ಬಾ" ಎಂದು ಸಂಯಮದಿಂದ ಹೇಳಿದ.

"ಅದು ಸಾಧ್ಯವಿಲ್ಲ" ಎಂದಳು ಮಗಳು.

"ಹಾಗಿದ್ದರೆ ನಿನಗೆ ಈ ಮನೆಯಲ್ಲಿ ಸ್ಥಾನವಿಲ್ಲ" ಎಂದ ತಂದೆ.

"ಆ ಸ್ಥಿತಿಯಲ್ಲೂ ನಾನು ಗಂಡನ ಮನೆಗೆ ಹೋಗಲು ಇಷ್ಟಪಡುವುದಿಲ್ಲ" ಎಂದಳು ಮಗಳು ಸ್ಥಿರಚಿತ್ತಳಾಗಿ.

ದಿವ್ಯದೃಷ್ಟಿಯಿಂದ ಪರಿಸ್ಥಿತಿಯನ್ನು ಅವಲೋಕಿಸಿದ ತ್ವಷ್ಟ್ರುವಿಗೆ ಮಗಳ ಕೆಲಸ ತುಂಬಾ ಕೋಪವನ್ನುಂಟು ಮಾಡಿತು. "ಅಧಿಕ ಪ್ರಸಂಗಿ. ನೀನೇ ತಪಸ್ಸು ಮಾಡಿ ಗಂಡನ ತಾಪವನ್ನು ಕಡಿಮೆ ಮಾಡದೆ ಹೀಗೆ ಓಡಿ ಬರುವುದೇ? ಇದು ನಮ್ಮ ಕುಲಕ್ಕೇ ಅಪಮಾನ. ನಿನ್ನ ಈ ವರ್ತನೆಗೆ ಶಾಪವೇ ಯೋಗ್ಯವಾದದ್ದು. ಕುದುರೆಯಾಗಿ ಕಾಡಿನಲ್ಲಿರು" ಎಂದು ತ್ವಷ್ಟ್ರುಬ್ರಹ್ಮ ಮಗಳನ್ನು ಶಪಿಸಿದ.

ಸಂಜ್ಞಾದೇವಿಯು ಹೆಣ್ಣುಕುದುರೆ (ಅಶ್ವಿನಿ)ಯಾಗಿ ಕಾಡನ್ನು ಸೇರಿದಳು.

ಛಾಯಾದೇವಿಯು ವಿವಸ್ವಂತನ ಸೇವೆಯನ್ನು ಮಾಡಿಕೊಂಡಿದ್ದಳು. ಆಕೆಗೆ ಕಾಲಾನುಕ್ರಮದಲ್ಲಿ ಶನೈಶ್ಚರನೆಂಬ ಮಗನು, ತಪತಿ ಎಂಬ ಮಗಳು ಹುಟ್ಟಿದರು. ಗಂಡನಿಗೆ ಸಂಜ್ಞಾದೇವಿಯು ಇಲ್ಲದ ಸುಳಿವೇ ದೊರೆಯದಂತೆ ಆಕೆಯ ಸಂಸಾರವು ಸಾಗಿತ್ತು.

ಮಕ್ಕಳು ಆಡಿಕೊಳ್ಳುತ್ತಿದ್ದರು. ಶನಿಯು ಕುಂಟ. ಯಮ ಅದಕ್ಕಾಗಿ ಶನಿಯನ್ನು ತಮಾಷೆ ಮಾಡಿದ. ಇದರಿಂದ ಛಾಯಾದೇವಿಯು ಕೋಪಗೊಂಡು ಯಮನನ್ನು ಮೂದಲಿಸಿದಳು. ಯಮನು ತಾಯಿಯ ಮೇಲೆ ಕೋಪಗೊಂಡು ತನ್ನ ಬಲಗಾಲನ್ನು ತೋರಿಸಿದ. ಛಾಯಾ ದೇವಿಯು ಕೋಪದ ಅಗ್ನಿಪರ್ವತವಾದಳು. 'ನಿನ್ನ ಕಾಲು ಹಾಳಾಗಿ ಕೀವು, ರಕ್ತ, ಹುಳುಗಳಿಂದ

ತುಂಬಲಿ' ಎಂದು ಶಪಿಸಿದಳು. ತಾಯಿಯ ಈ ಶಾಪದಿಂದ ಖಿನ್ನನಾದ ಯಮ ನೇರವಾಗಿ ತಂದೆಯ ಬಳಿಗೆ ಹೋಗಿ, ವಿಷಯವನ್ನು ವಿವರಿಸಿ, ತಾಯಿಯ ಶಾಪವನ್ನು ಹೇಳಿದ. ವಿವಸ್ವನ್ 'ಕಾಲಿನ ರಕ್ತಮಾಂಸಗಳನ್ನು ಪಕ್ಷಿಯೊಂದು ತಿಂದನಂತರ ಕಾಲು ಮೊದಲಿನಂತೆಯೇ ಇರುತ್ತದೆ' ಎಂದು ವಿಶಾಪವನ್ನು ಹೇಳಿದ. ಆದರೆ ಈ ಘಟನೆಯಿಂದ ಜೀವನದಲ್ಲಿ ಜುಗುಪ್ಸೆಗೊಂಡು ವೈರಾಗ್ಯ ತಳೆದ ಯಮನು ತಪಸ್ಸನ್ನು ಪ್ರಾರಂಭಿಸಿದ. ಈ ತಪಸ್ಸಿನಿಂದ ಧರ್ಮದೇವನೆಂದು ಹೆಸರಾಗಿ ಜಗತ್ತಿನಲ್ಲಿಯ ಪಾಪ ಪುಣ್ಯಗಳನ್ನು ಗಮನಿಸುವ ಕೆಲಸವನ್ನು ಪಡೆದುಕೊಂಡ.

ವಿವಸ್ವನ್‌ಗೆ ತನ್ನ ಹೆಂಡತಿಯ ಬಗ್ಗೆ ಅನುಮಾನ ಬಂತು. ತಾಯಿ ತನ್ನ ಮಗನಿಗೇ ಶಾಪವನ್ನು ಕೊಡುವುದು ಎಂದರೆ ತಾಯ್ತನಕ್ಕೆ ಅದು ಕಳಂಕ. ಕುಪುತ್ರನಿರುವುದು ಸಾಧ್ಯವಿದೆ. ಆದರೆ ಕುಮಾತೆ ಇರುವುದು ಸಾಧ್ಯವೇ ಇಲ್ಲ. ಆದ್ದರಿಂದ ಈಗ ತನ್ನೊಡನೆ ಇರುವವಳು ಸಂಜ್ಞಾದೇವಿಯಲ್ಲ ಎಂಬ ಅನುಮಾನವು ಬಲವಾಗಿ ಬೇರೂರಿತು.

ಕೊನೆಗೂ ತನ್ನ ಹೆಂಡತಿಯಾಗಿ ಜೊತೆಯಲ್ಲಿ ಇರುವವಳು ಸಂಜ್ಞಾದೇವಿಯಲ್ಲ ಎಂಬುದನ್ನು ವಿವಸ್ವನ್ ಖಚಿತವಾಗಿ ಗುರ್ತಿಸಿದ. ಛಾಯಾದೇವಿಯನ್ನು ತೀವ್ರ ಸ್ವರದಲ್ಲಿ ಪ್ರಶ್ನಿಸಿದ. ಈ ಗದರಿಕೆಗೆ ಹೆದರಿದ ಛಾಯಾದೇವಿಯು ಸತ್ಯಸಂಗತಿಯನ್ನು ತಿಳಿಸಿದಳು. ವಿವರಗಳನ್ನು ತಿಳಿದ ವಿವಸ್ವಂತನಿಗೆ ಸಂಜ್ಞಾದೇವಿಯ ಬಗ್ಗೆ ಕರುಣೆ- ಅನುಕಂಪಗಳುಂಟಾದವು. ತನಗೆ ತೊಂದರೆಯಾಗಿದ್ದರೂ ಅದನ್ನು ಹೇಳದೆ ತೌರಿಗೆ ಹೋದ ಮಡದಿ ತನಗೆ ಯಾವ ಸುಳಿವೂ ದೊರೆಯದ ರೀತಿಯಲ್ಲಿ ಇಷ್ಟು ವ್ಯವಸ್ಥೆ ಮಾಡಿದ್ದಾಳಲ್ಲಾ ಎಂದು ಮೆಚ್ಚುಗೆಯೂ ಆಯಿತು. ಆಕೆ ತೌರಿನಲ್ಲಿ ಇಲ್ಲದೆ ಕಾಡಿನಲ್ಲಿ ಕುದುರೆಯ ರೂಪದಲ್ಲಿ ಇರುವುದನ್ನು ಕಂಡುಕೊಂಡ ವಿವಸ್ವನ್ ತಾನೂ ಗಂಡು ಕುದುರೆಯ ರೂಪದಲ್ಲಿ ಸಂಜ್ಞಾಳನ್ನು ಸೇರಿದ.

### ಅಶ್ವಿನೀ ದೇವತೆಗಳು

ಸಂಜ್ಞಾದೇವಿಗೆ ಗಂಡನನ್ನು ಕಂಡು ಸಂತೋಷವಾದರೂ ಗಂಡನೂ ಕುದುರೆಯಾದನಲ್ಲಾ ಎಂಬ ವ್ಯಾಕುಲ ಕಾಡದೆ ಬಿಡಲಿಲ್ಲ. ತನ್ನ ಅಳಲನ್ನು ತೋಡಿಕೊಂಡಳು. ತ್ವಷ್ಟೃಬ್ರಹ್ಮನೇ ತಮ್ಮ ಸಮಸ್ಯೆಗೆ ಪರಿಹಾರವನ್ನು ತೋರಬೇಕೆಂದು ಇಬ್ಬರೂ ತೀರ್ಮಾನಿಸಿದರು. ಕೂಡಲೇ ಹೋಗಲು ಸಂಕೋಚ. ಕೆಲವು ಕಾಲ ಕಾಡಿನಲ್ಲಿಯೇ ಕಳೆದರು. ಅವರು ಇದ್ದದ್ದು ಅತ್ಯಂತ ಪವಿತ್ರವಾದ ಉತ್ತರ ಕುರು ಭೂಮಿಯಲ್ಲಿ. ಅದು ಮೇರು ಪರ್ವತದ ದಕ್ಷಿಣ ಭಾಗದಲ್ಲಿವೆ. ಪರಸ್ಪರ ಅನುರಾಗದಿಂದ ಸಹಜೀವನ ನಡೆಸುತ್ತಿದ್ದರು. ಪ್ರಶಾಂತವಾದ ದಿವ್ಯವಾದ ಬ್ರಾಹ್ಮೀ ಮುಹೂರ್ತದಲ್ಲಿ ಆ ಅಶ್ವದಂಪತಿಗೆ ಸುಮೇರುವಿನ ಬಳಿಯ ಪುಣ್ಯಪ್ರದವಾದ ಅರಣ್ಯ ಸೀಮೆಯಲ್ಲಿ, ಅಪರೂಪ ಸೌಂದರ್ಯ ನಿಧಿಗಳಾದ ಅವಳಿಗಳು ಜನಿಸಿದರು. ಇವರ ಹೆಸರೇ **ಅಶ್ವಿನೀದೇವತೆಗಳು**.

ಅಶ್ವಿನಿಯಾಗಿದ್ದ ಸಂಜ್ಞಾದೇವಿಯ ಮೂಗಿನಿಂದ ಹುಟ್ಟಿದ್ದಕ್ಕಾಗಿ ಇವರಿಬ್ಬರಿಗೂ **ನಾಸತ್ಯರು** ಎಂಬ ಹೆಸರು ಬಂತು. ಹಾಗೆಯೇ ಅತ್ಯಾಶ್ಚರ್ಯಕರವಾದ ಸ್ವರೂಪ, ಸ್ವಭಾವಗಳು ಇವರದಾದ್ದರಿಂದ **ದಸ್ರು**ಗಳೆಂದು ಕರೆಯಲ್ಪಟ್ಟರು. ಅಶ್ವಿನಿಯ ಮಕ್ಕಳಾದುದರಿಂದ **ಅಶ್ವಿನಿಗಳು, ಆಶ್ವಿನೇಯರು, ಅಶ್ವಿನೀ ಕುಮಾರರು** ಎಂದು ಪ್ರಖ್ಯಾತರಾದರು.

ನಾಸತ್ಯರ ನಂತರ ಅಶ್ವದಂಪತಿಗಳು **ರೇವಂತ** ಎಂಬ ಇನ್ನೊಬ್ಬ ಮಗನನ್ನು ಹೆತ್ತರು. ಈತನು ನಂತರದಲ್ಲಿ ಅಶ್ವಾರೋಹಣ ವಿದ್ಯೆಯಲ್ಲಿ ಅಗ್ರೇಸರನಾಗಿ, ಆದ್ಯನಾಗಿ ಪ್ರಸಿದ್ಧಿಯನ್ನು ಪಡೆದ. ಅಶ್ವಿನಿಗಳು ಸಕಲ ವಿದ್ಯಾ ಪಾರಂಗತರಾಗಿ ಆರೋಗ್ಯಕ್ಕೆ ಅಧಿಷ್ಠಾತೃವಾಗಿರುವ ಸೂರ್ಯನ ಸಂತಾನವಾದುದರಿಂದ ಆಯುರ್ವೇದವು ಅವರಿಗೆ ಅಭಿಮಾನದ ವಿದ್ಯೆಯಾಯಿತು. ಅದರಲ್ಲಿ ಅದ್ವಿತೀಯ ಪ್ರವೀಣರಾಗಿ **ದೇವವೈದ್ಯ**ರೆಂಬ ಪ್ರಶಸ್ತಿಯನ್ನು ನಂತರದ ಕಾಲದಲ್ಲಿ ಪಡೆದು ಕೊಂಡರು.

### ಸೂರ್ಯನನ್ನು ತರಗಣೆಗೆ ಒಡ್ಡಿದರು

ನಿತ್ಯ ಕರ್ತವ್ಯನಿರತನಾಗಿರಬೇಕಾಗಿದ್ದ ವಿವಸ್ವನ್ ಎಷ್ಟು ಕಾಲ ಹೀಗೆ ಹೆಂಡತಿಯೊಂದಿಗೆ ಕಾಡಿನಲ್ಲಿ ಇರುವುದು ಸಾಧ್ಯ? ಶಾಪ ಕೊಟ್ಟವರೇ ವಿಶಾಪವನ್ನೂ ಕೊಡಬೇಕಲ್ಲವೇ? ಆದ್ದರಿಂದ ಶಾಪವಿಮುಕ್ತಿಗಾಗಿ ತ್ವಷ್ಟೃಬ್ರಹ್ಮನನ್ನೇ ಆಶ್ರಯಿಸದೆ ಅನ್ಯಮಾರ್ಗವೇ ಇರಲಿಲ್ಲ. ತ್ವಷ್ಟೃಬ್ರಹ್ಮನಿಗೂ ಈಗ ಮಗಳ ಮಾತಿನಲ್ಲಿ ಸತ್ಯ ಗೋಚರಿಸುತ್ತಿತ್ತು. ಸಮಸ್ಯೆಯನ್ನು ಪರಿಹರಿಸದೆ ಶಾಪ ಕೊಟ್ಟಿದ್ದು ಸರಿ ಎಂಬುದಾಗಿ ಆತನೂ ಈಗ ಹೇಳುವ ಸ್ಥಿತಿಯಲ್ಲಿರಲಿಲ್ಲ. ವಿವಸ್ವಂತನ ಶಾಖವನ್ನು ಕಡಿಮೆ ಮಾಡಲು ಇರುವ ಒಂದೇ ಮಾರ್ಗವೆಂದರೆ ಆತನ ಕಿರಣಗಳನ್ನು ಕಡಿಮೆ ಮಾಡುವುದು. ಇದಕ್ಕೆ ಸೂರ್ಯನಿಗೆ ಸಾಣೆ ಹಿಡಿಯಬೇಕು. ಇದನ್ನು ಈ ಹಾಡು ಚೆನ್ನಾಗಿ ವಣಿಸುತ್ತದೆ –

**ಉದಯವನಗವರನೊಡ್ಡು ಹಲಿಗೆಯ**
**ನೊದಗಿಸುತಲಿತಿ ದುಗುದಿಂ**
**ಮುದದಿ ಮಂದರವಡ್ಡ ಮರದೋಲ್**
**ಚದುರು ನಿಲ್ಲಿಸಿ ಬೇಗದಿಂ**
**ಹದಗೊಳಿಸಿ ರಾಹುವಿನ ನಖಗೊನೆ**
**ಕದಲದಿಹವುಳಿ ಶಾಸ್ತ್ರದಿಂ**
**ಪದುಳದಿಂ ಫಣಿಪನನು ಪಗ್ಗ ಶು**

**ಭದಲಿ ಬಿಗಿದನು ವಹಿಲದಿಂ**
**ಹಿಡಿದನಾ ಸೂರ್ಯನ ಸಾಣೆಗೆ ತ್ವಷ್ಟ ಹಿಡಿದಾ**
**ಹಿಡಿದ ತರಗಿಣಿಯ ದೃಢವಿಕ್ರಮಮಯ**
**ಪೊಡವಿತ್ರಯ ಗಡಗಡನೆ ನಡುಗವೋಲ್**

ಉದಯ – ಅಸ್ತಾಚಲಗಳನ್ನು ಒಡ್ಡುಹಲಿಗೆಗಳನ್ನಾಗಿ ಮಾಡಿಕೊಂಡು, ಮಂದರ ಪರ್ವತವನ್ನೇ ಅಡ್ಡ ಹಲಿಗೆಯನ್ನಾಗಿಸಿಕೊಂಡು, ಆದಿಶೇಷನನ್ನು ಕೈಹಗ್ಗವನ್ನಾಗಿ ಮಾಡಿಕೊಂಡು, ವಿವಸ್ವಂತನನ್ನು ಪಿಂಡಾಕಾರಕ್ಕೆ ಪರಿವರ್ತಿಸಿ

ಕೊಂಡು ಸಾಣೆಮರಕ್ಕೆ ಸಿಲುಕಿಸಿ, ರಾಹುವಿನ ಉಗುರುಗಳನ್ನೇ ಗೋರುಳಿಗಳನ್ನಾಗಿ ಮಾಡಿಕೊಂಡು, ಸಾಣೆ ಹಿಡಿಯತೊಡಗಿದ ತ್ವಷ್ಟುಬ್ರಹ್ಮ. ಈ ಕೃತ್ಯದಿಂದ ಮೂರು ಲೋಕಗಳು ಗಡಗಡನೆ ನಡುಗಿದವು. ಉಗ್ರ ಕಿರಣಗಳು ರಭಸದಿಂದ ಕತ್ತರಿಸಿಕೊಂಡು ಕೆಳಕ್ಕೆ ಬಿದ್ದವು. ಆ ಕಿರಣಗಳಿಂದ ಭೂಮಿಯು ಸುಟ್ಟು ಹೋಗುವುದೇನೋ ಎನಿಸುವಂತಿತ್ತು.

ಹೀಗೆ ವಿವಸ್ವಂತನ ಮೈ ಶಾಖವನ್ನು ಕಡಿಮೆಮಾಡಿದ ನಂತರ, ಕತ್ತರಿಸಿ ಹಾಕಿದ್ದ ಕಿರಣಗಳಿಂದ ದೇವತೆಗಳಿಗೆ ಆಯುಧಗಳನ್ನು ತ್ವಷ್ಟುಬ್ರಹ್ಮನೇ ಮಾಡಿಕೊಟ್ಟ.

ಈ ವಿಷಯವನ್ನು ಋಗ್ವೇದದಲ್ಲಿಯೇ ಹೇಳಲಾಗಿದೆ : ತನ್ನ ಅಳಿಯನಾದ ವಿವಸ್ವನ್ ಆದಿತ್ಯನನ್ನು ಮರವನ್ನು ತರಗಣಿಗೆ ಒಡ್ಡುವಂತೆ ಒಡ್ಡಿದ. ಆತನ ಕಿರಣಗಳನ್ನು ಕತ್ತರಿಸಿ ಸೂರ್ಯಶಾಖವನ್ನು ಕಡಿಮೆ ಮಾಡಿದ (**ತ್ವಷ್ಟಾ ದುಹಿತ್ರೇವಹತುಂ ಕೃಣೋತೀತೀದಂ ವಿಶ್ವಭುವನಂ ಸಮೇತಿ**).

## ತಪತಿಯ ಮದುವೆ

ಈ ಘಟನೆಯ ನಂತರ ವಿವಸ್ವಂತನ ಕುಟುಂಬವು ಒಂದು ವ್ಯವಸ್ಥೆಗೆ ಬಂತು. ಛಾಯಾದೇವಿಯ ಮಗಳಾದ ತಪತಿಯು ಬಹು ಸುಂದರವಾಗಿದ್ದಳು. ಕಾಡಿನಲ್ಲಿ ಸುತ್ತಾಡುತ್ತಾ ಪ್ರಕೃತಿಯ ಮಡಿಲನಲ್ಲಿ ನಲಿದಾಡುವುದು ಈಕೆಗೆ ತುಂಬ ಪ್ರಿಯವಾದ ಹವ್ಯಾಸ. ಇದೇ ರೀತಿಯಾಗಿ ಒಂದು ಪರ್ವತ ಪ್ರದೇಶದಲ್ಲಿದ್ದಾಗ ಬೇಟೆಗಾಗಿ ಬಂದ ಸಂವರಣನ ಕುದುರೆಯು ಕಾಡಿನಲ್ಲಿ ಇದ್ದಕ್ಕಿದಂತೆಯೇ ಸತ್ತು ಹೋಯಿತು. ಅನ್ಯಮಾರ್ಗವಿಲ್ಲದೆ ಸಂವರಣನು ಕಾಲು ನಡಿಗೆಯಲ್ಲಿಯೇ ಹೊರಟ. ಸಂವರಣನು ಋಕ್ಷನ ಮಗ. ಈತನ ತಾಯಿ ರಥಂತರೀ. ಋಕ್ಷನ ತಂದೆ ಅಜಮಿಳ. ಸಂವರಣನು ಕಾಡಿನಲ್ಲಿ ವನದೇವತೆಯಂತೆ ಶೋಭಾಯಮಾನಳಾಗಿದ್ದ ತಪತಿಯನ್ನು ಕಂಡ. ಮೊದಲ ನೋಟಕ್ಕೆ ಆಕೆಯ ರೂಪ ಲಕ್ಷಣ ಯೌವನಗಳಿಗೆ ಮನಸೋತ. ಆಕೆಯೊಂದಿಗೆ ಮಾತನಾಡಿದ. ಸುಸಂಸ್ಕೃತ ಮಾತು ನಡೆಗಳು ಅವನನ್ನು ಮೋಹಿಸುವಂತೆ ಒತ್ತಾಯಿಸಿದವು. ಗಾಂಧರ್ವ ವಿವಾಹ ಮಾಡಿಕೊಳ್ಳಬೇಕೆಂಬ ತನ್ನ ಬಯಕೆಯನ್ನು ತಪತಿಯ ಮುಂದೆ ಇರಿಸಿದ.

ಈ ಮಾತಿಗೆ ತಪತಿಯು ಅಷ್ಟೇ ನಾಜೂಕಾಗಿ "ನನ್ನ ಮದುವೆಯು ನನ್ನ ತಂದೆಯ ಒಪ್ಪಿಗೆಯ ನಂತರವೇ ನಡೆಯುತ್ತದೆ. ಆದ್ದರಿಂದ ನೀವು ಈ ಪ್ರಸ್ತಾವನೆಯನ್ನು ಅವರ ಮುಂದೆ ಇರಿಸುವುದು ಕ್ಷೇಮ" ಎಂದು ಒಂದೇ ಮಾತಿನಲ್ಲಿ ಉತ್ತರಿಸಿದಳು.

ಅನ್ಯ ಮಾರ್ಗವನ್ನು ಕಾಣದ ಸಂವರಣನು ಅಂದಿನಿಂದಲೇ ಸೂರ್ಯಾರಾಧನೆಯನ್ನು ಪ್ರಾರಂಭಿಸಿದ. ವಿವಸ್ವಂತನನ್ನು ಮೆಚ್ಚಿಸಿ ಆತನ ಮಗಳನ್ನು ಮದುವೆಯಾದ. ತಪತಿಯಿಂದ ಸಂವರಣನು ಕುರುವಂಶದ ಸ್ಥಾಪಕನಾದ ಕುರು ಎಂಬ ಪುತ್ರನನ್ನು ನಂತರದಲ್ಲಿ ಪಡೆದ.

## ವಂಶೋದ್ಧಾರಕನಾದ ಮಗ

ಸಂಜ್ಞಾದೇವಿಗೆ ಮಗನೂ, ವಿಷ್ಟಿ (ಯಮುನಾ) ಎಂಬ ಮಗಳೂ ಇದ್ದರು ಎಂಬುದನ್ನು ಈ ಮೊದಲೇ ಹೇಳಿದೆ. ವಿಷ್ಟಿಯು ರೂಪದಲ್ಲಿ ಭಯಂಕರವಾಗಿದ್ದಳು. ಹೆಣ್ಣು ವಯಸ್ಸಿಗೆ ಬರುತ್ತಲೇ ಮದುವೆ ಮಾಡಬೇಕಾದದ್ದು ಆಕೆಯ ತಂದೆಯ ಕರ್ತವ್ಯ. ಈ ಬಗ್ಗೆ ಆದಿತ್ಯನೂ ಯೋಚಿಸಿದ. ಕೆಲವರಲ್ಲಿ ಈ ಬಗ್ಗೆ ಪ್ರಸ್ತಾಪವನ್ನೂ ಮಾಡಿದ್ದ. ವಿಷ್ಟಿಯನ್ನು ನೋಡಿದವರ್‍ಯಾರೂ ಮದುವೆಗೆ ಒಪ್ಪಲಿಲ್ಲ. ಇದನ್ನು ಗಮನಿಸಿದ ವಿವಸ್ವಂತನು ತುಂಬಾ ದುಃಖಿತನಾದ.

ವಿಷ್ಟಿಗೂ ಈ ವಿಷಯಗಳನ್ನು ಕೇಳಿ, ಕಂಡು ಮನಸ್ಸು ತುಂಬಾ ಖಿತಿಗೊಂಡಿತು. "ಮಗಳಿಗೆ ಸೂಕ್ತವರನನ್ನು ಹುಡುಕಿ ಮದುವೆ ಮಾಡುವುದು ತಂದೆಯ ಕರ್ತವ್ಯ. ಇದರಿಂದ ತಂದೆಯಾದವನು ಕೃತಾರ್ಥನಾಗುತ್ತಾನೆ. ಆದ್ದರಿಂದ ಮಗಳ ಮದುವೆಯನ್ನು ಪ್ರಯತ್ನ ಪೂರ್ವಕವಾಗಿಯಾದರೂ ಮಾಡಿ ಮುಗಿಸಬೇಕು. ಕನ್ಯೆಯು ಗೃಹಸ್ಥನ ಧರ್ಮಸಾಧನ. ಮದುವೆ ಮಾಡದಿದ್ದರೆ ತಂದೆಯು ನರಕದಲ್ಲಿ ಉಳಿಯುತ್ತಾನೆ. ಕನ್ಯೆಯ ವಿವಾಹ ಸಮಯವನ್ನು ಮರೆತು ಕಾಲಾತಿಕ್ರಮಣಕ್ಕೆ ತುತ್ತಾಗುವಂತೆ ಮಾಡಬಾರದು" ಎಂದು ತನ್ನ ತಂದೆಗೆ ಆತನ ಹೊಣೆಗಾರಿಕೆಯನ್ನು ತಿಳಿಹೇಳಿದಳು.

ಮಗಳ ಈ ಮಾತುಗಳನ್ನು ಕೇಳಿದ ತಂದೆಯು "ನಾನೇನು ಮಾಡಲಿ? ನಿನ್ನ ರೂಪವು ಎಲ್ಲರನ್ನೂ ಹೆದರಿಸುವಂತಿದೆ. ಮದುವೆಯ ಸಂದರ್ಭದಲ್ಲಿ ಎಲ್ಲಾ ಹೆಂಗಸರೂ ಗಂಡಸರೂ ಪರಸ್ಪರ ರೂಪ, ಕುಲ, ವಯಸ್ಸು, ಧನ, ವಿದ್ಯೆ, ಗುಣ, ಶೀಲಗಳನ್ನು ಗಮನಿಸುತ್ತಾರೆ. ಅಂತಹುದರಲ್ಲಿ ನನ್ನ ಪಾತ್ರವೇನು? ಯಾರಿಗೆ ನಿನ್ನನ್ನು ದಾನ ಮಾಡಲಿ? ವೃಥಾ ನನ್ನನ್ನೇಕೆ ದೂರುತ್ತಿದ್ದೀಯೆ? ಯಾರಿಗಾದರೂ ದಾನ ಮಾಡು ಎಂದು ನೀನು ನನಗೆ ಸಮ್ಮತಿ ಸೂಚಿಸಿದ್ದಾದರೆ ನಿನ್ನನ್ನು ಸ್ವೀಕರಿಸಲು ಸಿದ್ಧವಾಗುವ ಯಾರಿಗಾದರೂ ದಾನವಾಗಿ ನೀಡುತ್ತೇನೆ..." ಎಂದು ಹೇಳಿದ.

"ಪತಿ, ಪುತ್ರ, ಧನ, ಸುಖ, ಆಯಸ್ಸು ಮತ್ತು ರೂಪಗಳು ನಮ್ಮ ಪೂರ್ವ ಜನ್ಮದಲ್ಲಿ ನಾವು ಮಾಡುವ ಕರ್ಮಗಳ ಫಲವಾಗಿ ಲಭಿಸುತ್ತವೆ. ಪೂರ್ವ ಜನ್ಮದ ಒಳಿತು – ಕೆಡುಕುಗಳಿಗೆ ಅನುಸಾರವಾಗಿ ಈ ಜನ್ಮದಲ್ಲಿ ಸುಖ–ದುಃಖಗಳು ಲಭಿಸುತ್ತವೆ. ಆದ್ದರಿಂದ ಕನ್ಯಾಪಿತೃವಾದವನು ವಂಶಾನುಕ್ರಮ ಪದ್ಧತಿಯನ್ನು ಅನುಸರಿಸಬೇಕು. ನಂತರ ಆಗಬೇಕಾದದ್ದೇನೋ ದೈವವೇ ನಿರ್ಣಯಿಸುತ್ತದೆ" ಎಂದು ವಿಷ್ಟಿ ತನ್ನ ತಂದೆಗೆ ಹೇಳಿದಳು.

ವಿವಸ್ವಂತನು ಈ ಮಾತನ್ನು ಆಲಿಸಿದ. ವಿಷ್ಟಿಯ ಸೋದರ ಮಾವನಾದ ವಿಶ್ವರೂಪಾಚಾರ್ಯನನ್ನು ಕಂಡ. ಮೂರು ತಲೆಗಳಿದ್ದ ಆತನೂ ಭಯಂಕರ ಸ್ವರೂಪನೇ. ಆದರೆ ಸದಾಚಾರಿಯೆಂದು, ಸದ್ಬ್ರಾಹ್ಮಣನೆಂದು ಪ್ರಖ್ಯಾತನಾಗಿದ್ದವನು. ಆತನಿಗೆ ವಿಷ್ಟಿಯನ್ನು ಕೊಟ್ಟು ವಿವಾಹವನ್ನು ನಡೆಸಿದ.

ಅವರಿಬ್ಬರೂ ಅನ್ಯೋನ್ಯವಾಗಿದ್ದರು. *ಅವರಿಗೆ ಗಂಡ, ಅತಿಗಂಡ, ರಕ್ತಾಕ್ಷ, ಕ್ರೋಧನ, ವ್ಯಯ, ದುರ್ಮುಖ ಮತ್ತು ಕೊನೆಯವನಾಗಿ ಹರ್ಷಣ ಎಂಬ ಗಂಡು ಮಕ್ಕಳಾದರು.* ಹರ್ಷಣನು ಸುಶೀಲನೂ ಶಾಂತಮತಿಯೂ ಶುದ್ಧಾತ್ಮನೂ ಆಗಿದ್ದ. ಒಮ್ಮೆ ತನ್ನ ಸೋದರಮಾವನಾದ ಯಮರಾಜನ ಮನೆಗೆ ಎಂದರೆ ಯಮ ಲೋಕಕ್ಕೆ ಹೋದ. ಅಲ್ಲಿ ನಾನಾ ದುಃಖಗಳನ್ನು ಸುಖಗಳನ್ನು ಅನುಭವಿಸುತ್ತಿದ್ದ ಜೀವರನ್ನು ಕಂಡ. ಹರ್ಷಣನು ತನ್ನ ಸೋದರ ಮಾವ ಯಮಧರ್ಮನಿಗೆ ನಮಸ್ಕರಿಸಿ "ಸುಖಗಳನ್ನು ಅನುಭವಿಸುತ್ತಿರುವವರು ಯಾರು? ದುಃಖಗಳನ್ನು ಅನುಭವಿಸುತ್ತಿರುವ ಇವರು ಯಾರು?" ಎಂದು ಕೇಳಿದ.

"ಯಾರು ಶಾಸ್ತ್ರೋಕ್ತ ಕರ್ಮಗಳ ಉಲ್ಲಂಘನೆಯನ್ನು ಮಾಡುವುದಿಲ್ಲವೋ ಅವರು ಎಂದಿಗೂ ನರಕದ ದರ್ಶನವನ್ನೇ ಮಾಡುವುದಿಲ್ಲ. ಯಾರು ಶಾಸ್ತ್ರಗಳನ್ನು ಅಂಗೀಕರಿಸುವುದಿಲ್ಲವೋ, ಆಚಾರವನ್ನು ಲಕ್ಷಿಸುವುದಿಲ್ಲವೋ, ಅಥವಾ ವಿದ್ವಾಂಸರಾದವರ ಅಭಿಪ್ರಾಯಗಳನ್ನು ಗಮನಿಸುವುದಿಲ್ಲವೋ, ಸದಾ ಶಾಸ್ತ್ರೋಕ್ತ ವಿಧಿಗಳನ್ನು ಅತಿಕ್ರಮಿಸುತ್ತಾರೆಯೋ ಅಂತಹವರೇ ನರಕದಲ್ಲಿ ಪ್ರವೇಶಿಸುತ್ತಾರೆ" ಎಂದು ಯಮಧರ್ಮನು ಉತ್ತರಿಸಿದ.

ಈ ಮಾತನ್ನು ಕೇಳಿದ ಹರ್ಷಣನು "ನನ್ನ ತಂದೆಯಾದ ವಿಶ್ವರೂಪ ತ್ವಾಷ್ಟ್ರನು ತುಂಬಾ ಭಯಂಕರ ರೂಪಿ. ನನ್ನ ತಾಯಿ ವಿಷ್ಟಿಯೂ ಅಷ್ಟೇ. ನನ್ನ ತಂದೆ, ತಾಯಿ ಸೋದರರೆಲ್ಲಾ ಶಾಂತಮತಿಗಳು; ಮಹಾತ್ಮರು. ಅವರ ರೂಪಗಳು ಮಾತ್ರವೇ ವಿಕಾರವಾಗಿವೆ. ಅವರ ರೂಪಗಳು ಸುಂದರವಾಗುವುದರಿಂದ ಅವರಿಗೆ ಒಳಿತನ್ನುಂಟು ಮಾಡಿದಂತಾಗುತ್ತದೆ. ಹಾಗೆ ಮಾಡುವ ಕ್ರಮವನ್ನು ಧರ್ಮಜ್ಞರಾದ ನೀವು ನನಗೆ ಉಪದೇಶಿಸಬೇಕು. ಈ ರೀತಿಯ ಉಪದೇಶವನ್ನು ಪಡೆಯದೆ ನಾನು ಇಲ್ಲಿಂದ ಹೋಗುವುದಿಲ್ಲ" ಎಂದು ಹರ್ಷಣನು ಯಮಧರ್ಮನಲ್ಲಿ ಮನವಿಮಾಡಿ ಕೊಂಡ.

"ನಿನ್ನ ಶುದ್ಧ ಮನಸ್ಸಿಗೆ ನಾನು ಸಂಪ್ರೀತನಾಗಿದ್ದೇನೆ. ***ಪುತ್ರರು ಅನೇಕರಾಗಿದ್ದರ ಬಹುದಾದರೂ ಅವರೆಲ್ಲರೂ ವಂಶೋದ್ಧಾರಕರಾಗುವುದಿಲ್ಲ.*** ಕೇವಲ ಸಂಖ್ಯಾದೃಷ್ಟಿ ಯಿಂದ ಬಹುವಾಗಿರುವುದರಿಂದ ಯಾರಿಗೂ ಲಾಭವಿಲ್ಲ. ಒಬ್ಬನೇ ಒಬ್ಬ ಮಗನಿದ್ದರೂ ಅವನಿಂದ ಕುಲವೆಲ್ಲಾ ಉದ್ಧಾರವಾಗುವುದಾದರೆ ಅವನೇ ಆ ಕುಲದ ಆಧಾರವಾಗಿರುತ್ತಾನೆ. ಅವನಿಂದಲೇ ಅವನ ಪೂರ್ವಜರೂ ಕೂಡ ಉದ್ಧರಿಸಲ್ಪಡುತ್ತಾರೆ. ಅಂತಹವನು ಮಾತ್ರವೇ ಪುತ್ರ ಎಂದು ಕರೆಸಿಕೊಳ್ಳುವ ಅರ್ಹತೆಯನ್ನು ಪಡೆದಿರುತ್ತಾನೆ. ಉಳಿದವರೆಲ್ಲಾ ಮೈ ಮೇಲಣ ಹುಣ್ಣುಗಳಂತೆ ವಂಶದ ಮೇಲಣ ವ್ರಣಗಳು ಮಾತ್ರವೇ.* ನೀನು ಅಂತಹ ಕುಲತಂತು ಪುತ್ರನು. ಆದ್ದರಿಂದ ನಿನ್ನ ಬಗ್ಗೆ ನನಗೆ ಅತೀವ ಮಮತೆ ಇದೆ. ನೀನು ಗೌತಮೀ ನದಿ ತೀರದಲ್ಲಿ ಈ ಸಕಲ ಚರಾಚರ ಜಗತ್ತುಗಳ ಸೃಷ್ಟಿಕರ್ತನಾದ ವಿಶ್ವಕರ್ಮ ಪರಮೇಶನನ್ನು ಕುರಿತು ತಪಸ್ಸನ್ನಾಚರಿಸು. ಆತನನ್ನು ಪ್ರಸನ್ನಗೊಳಿಸಿಕೊಂಡರೆ ನಿನ್ನ ಮನದ ಇಚ್ಛೆಯು ಪೂರೈಸುತ್ತದೆ" ಎಂದು ಯಮಧರ್ಮನು ಉಪದೇಶಿಸಿದ.

ಹರ್ಷಣನು ಅದೇ ರೀತಿಯಲ್ಲಿ ಗೌತಮಿಯಲ್ಲಿ ಮಿಂದು ತಪಸ್ಸನ್ನಾಚರಿಸಿದ. ವಿಶ್ವಕರ್ಮನು ಸಂಪ್ರೀತನಾಗಿ ವರವನ್ನು ನೀಡಿದ. ಇದರಿಂದ ಹರ್ಷಣನ ತಾಯಿ–ತಂದೆಗಳು ಭದ್ರರಾದರು. ಅವನ ಸೋದರರೆಲ್ಲಾ ಭದ್ರರಾದರು. ಆದ್ದರಿಂದ ಅವರ ಹೆಸರುಗಳು ***ಸರ್ವಭದ್ರ, ಭದ್ರದತ್ತ, ದೇವಭದ್ರ, ಜ್ಞಾನಭದ್ರ, ವಿಶ್ವಭದ್ರ, ಮಣಿಭದ್ರ ಮತ್ತು ಪ್ರಹರ್ಷಣ*** ಎಂಬುದಾಗಿ ಬದಲಾಯಿತು. ಈ ಏಳು ಮಂದಿಯು ಶಿಲ್ಪ ಬ್ರಾಹ್ಮಣರ ಗೋತ್ರರ್ಷಿಗಳಾಗಿ ವಿಖ್ಯಾತರಾಗಿದ್ದಾರೆ. ಇಂದಿಗೂ ಸಚ್ಚಾರಿತ್ರ್ಯದ ಮಹಿಮೆಯನ್ನು ಸಾರುವಂತಾಗಿದ್ದಾರೆ. ***ವಂಶೋನ್ನತಿಗೆ, ಕುಲದ ಉಚ್ಛ್ರಾಯಕ್ಕೆ ಯಾರು ತಪಸ್ಸು ಮಾಡುತ್ತಾರೆಯೋ ಅವರಿಗೆ ಮಂಗಳವಾಗುತ್ತದೆ.***

ವಿಶ್ವರೂಪಾಚಾರ್ಯ ತುಂಬಾ ಸಾತ್ವಿಕ, ನಿಷ್ಠಾಪರ, ಅಧ್ಯಯನಾಸಕ್ತ. ನೆರವು ಕೋರಿದವರಿಗೆ ಎಂದೂ ಇಲ್ಲ ಎಂದು ಹೇಳಿದ್ದೇ ಇಲ್ಲ. ಬ್ರಾಹ್ಮಣಶ್ರೇಷ್ಠನೆಂದು ಹೆಸರು ಪಡೆದಿದ್ದ. ಆತನದೇ ಸಂಸಾರ ದೊಡ್ಡದಾಗಿ ವರ್ಧಿಸಿತ್ತು. ಹರ್ಷಣನು ಪ್ರಹರ್ಷಣನಾದ ನಂತರವಂತೂ ವಿಶ್ವರೂಪಾಚಾರ್ಯರ ಸಂತತಿಯು ಬಹು ಪ್ರಖ್ಯಾತವಾಗಿ ತ್ವಾಷ್ಟ್ರೇಯರು ಎಂಬ ಪ್ರಸಿದ್ಧಿಯನ್ನು ಪಡೆದರು.

## ಬೃಹಸ್ಪತಿಯ ಮುನಿಸು

ಇಂದ್ರನು ತ್ರಿಲೋಕಾಧಿಪತಿ. ಲಕ್ಷ್ಮಿಯು ಅವನ ಸೆರೆಯಲ್ಲಿರುವ ಆಳು. ಇಂತಹ ಸಂಪತ್ತು ಇರುವವರಿಗೆ ಅಹಂಕಾರ ಬರುವುದು ಸ್ವಾಭಾವಿಕ. ಇದರಿಂದ ಆಚಾರ, ಮರ್ಯಾದೆ, ಸದಾಚಾರಗಳು ಕ್ಷೀಣಿಸುತ್ತವೆ. ಒಮ್ಮೆ ಇಂದ್ರಾಣಿಯಾದ ಶಚೀ ದೇವಿಯೊಂದಿಗೆ ಸಭೆಯಲ್ಲಿ ಇಂದ್ರನು ಮಂಡಿಸಿದ್ದ. ನಲವತ್ತೊಂಬತ್ತು ಮರುದ್ಗಣಗಳು, ಎಂಟು ಮಂದಿ ವಸುಗಳು, ಹನ್ನೊಂದು ಮಂದಿ ರುದ್ರರು, ಹನ್ನೆರಡು ಮಂದಿ ಆದಿತ್ಯರು, ಋಭುಗಳು, ವಿಶ್ವೇದೇವತೆಗಳು, ಮತ್ತು ಅಶ್ವಿನೀಕುಮಾರರು ಇಂದ್ರನ ಸೇವೆ ಮಾಡಲು ಸಿದ್ಧರಾಗಿ ಸಭೆಯಲ್ಲಿದ್ದರು. ಇವರೊಂದಿಗೆ ಸಿದ್ಧರು, ಸಾಧ್ಯರು, ಚಾರಣರು, ಗಂಧರ್ವರು, ಬ್ರಹ್ಮವಾದಿ ಮುನಿಗಣ, ವಿದ್ಯಾಧರರು, ಅಪ್ಸರೆಯರು, ಕಿನ್ನರರು, ಪಕ್ಷಿ ಮತ್ತು ನಾಗರು ಕೂಡ ಇಂದ್ರನ ಸೇವೆಗಾಗಿ ಸನ್ನದ್ಧರಾಗಿ ಉಪಸ್ಥಿತರಾಗಿದ್ದರು. ಇವರೆಲ್ಲರೂ ದೇವೇಂದ್ರನ ಸ್ತುತಿ ಮಾಡುತ್ತಿದ್ದರು. ಮೇಲೆ ಚಂದ್ರಮಂಡಲದಂತೆ ಶುಭ್ರ ಶ್ವೇತಚ್ಛತ್ರ ಶೋಭಾಯ ಮಾನವಾಗಿತ್ತು. ದಂಡ, ಚಾಮರ, ಲಾಂಛನಗಳ ವಾಹಕರು ರಾಜೋಚಿತವಾಗಿದ್ದರು. ಈ ದಿವ್ಯ ಪರಿವೇಶದಲ್ಲಿ ದೇವರಾಜ ಇಂದ್ರನು ಶೋಭಾಯಮಾನನಾಗಿದ್ದನು. ಇದೇ ಸಮಯದಲ್ಲಿ ದೇವಗುರು ಬೃಹಸ್ಪತಿಗಳು ಇಂದ್ರ ಸಭೆಯನ್ನು ಪ್ರವೇಶಿಸಿದರು.

---

* ಬಹವಃ ಸ್ಯುಃ ಸುತಾ ಕೇಚಿನ್ನೈವ ತೇ ಕುಲತಂತವಃ ।
ಏಕ ಏವ ಸುತಃ ಕಶ್ಚಿದ್ಯೇನ ತದ್ ಧ್ರಿಯತೇ ಕುಲಮ್ ॥
ಕುಲಸ್ಯಾಽಽ ಧಾರಭೂತೋ ಯೋ ಯಃ ಪಿತ್ರೋ ಪ್ರಿಯಕಾರಕಃ ।
ಯಃ ಪೂರ್ವಜಾನುದ್ಧರತಿ ಸ ಪುತ್ರಸ್ತ್ವಿತರೋ ಗದಃ ॥

– ಬ್ರಹ್ಮಪುರಾಣಂ, ಭದ್ರತೀರ್ಥವರ್ಣನಂ

ಬೃಹಸ್ಪತಿಯು ಸಾಮಾನ್ಯನಲ್ಲ. ಸಕಲ ಮಂತ್ರಗಳ ಅಧಿಪತಿಯಾದ್ದರಿಂದ ಆತನು **ವಾಚಸ್ಪತಿ** ಎಂದೂ ಪ್ರಖ್ಯಾತನು. ಪ್ರಥಮ ಸಂಕೃತಿಗಳಲ್ಲಿ (ಶಿಲ್ಪಿಗಳಲ್ಲಿ) ಒಬ್ಬ. ಆದ್ದರಿಂದ ಶಿಲ್ಪ ಮತ್ತು ಬ್ರಾಹ್ಮಣ್ಯವನ್ನು ತನ್ನ ವಶವರ್ತಿಯನ್ನಾಗಿ ಮಾಡಿ ಕೊಂಡಿದ್ದು ಸಕಲ ದೇವತೆಗಳಿಗೂ ಆಚಾರ್ಯ ಪುರುಷನಾಗಿದ್ದ. ಅಂತಹ ಹಿರಿಯನು ಸಭೆಗೆ ಬಂದರೆ ಇಂದ್ರನಾದವನು ಎದ್ದು ನಿಲ್ಲಲಿಲ್ಲ. ಗುರುವಿಗೆ ಆಸನವನ್ನು ತೋರಿ, ಅರ್ಘ್ಯ-ಪಾದ್ಯಗಳಿಂದ ಗೌರವಿಸಲೂ ಇಲ್ಲ. ಕನಿಷ್ಠ ತನ್ನ ಆಸನದಲ್ಲಿ ಅತ್ತಿತ್ತ ಚಲಿಸಲೂ ಇಲ್ಲ. ತ್ರಿಕಾಲ ಜ್ಞಾನಿಯಾದ ಬೃಹಸ್ಪತಿಗೆ ಇಂದ್ರನಲ್ಲಿ ತುಂಬಿದ್ದ ಐಶ್ವರ್ಯ ಮದವನ್ನು ಗುರ್ತಿಸಲು ಹೆಚ್ಚು ಸಮಯ ಬೇಕಾಗಲಿಲ್ಲ. ಈ ಸುಳಿವು ಸಿಕ್ಕ ಕೂಡಲೇ ಅಲ್ಲಿಂದ ಮೌನವಾಗಿ ಹಿಂತಿರುಗಿ ತನ್ನ ಮನೆಯನ್ನು ಸೇರಿಕೊಂಡ.

ಸ್ವಲ್ಪ ಹೊತ್ತಿನ ತರುವಾಯ ಇಂದ್ರನು ತಾನು ಗುರುವಿಗೆ ಅಪಮಾನ ಮಾಡಿದ್ದೇನೆ ಎಂಬುದನ್ನು ಅರ್ಥಮಾಡಿಕೊಂಡ. ಇಂದ್ರನು ಸಭೆಯಲ್ಲಿಯೇ ತನ್ನ ತಪ್ಪಿನ ಬಗ್ಗೆ ತಾನೇ ನಿಂದಿಸಿಕೊಳ್ಳತೊಡಗಿದ. 'ಸ್ವರ್ಗದ ರಾಜ್ಯಲಕ್ಷ್ಮಿಯು ನನ್ನಲ್ಲಿ ರಜೋಗುಣವನ್ನು ತುಂಬಿದೆಯಲ್ಲ! ಬುದ್ಧಿವಂತರಾದವರು ಯಾರು ತಾನೇ ಈ ಇಂದ್ರ ಪದವಿಯನ್ನು ಬಯಸುತ್ತಾರೆ? ಗುರುವನ್ನು ಗೌರವಿಸದವನ ರಾಜ್ಯವಾಗಲಿ, ರಾಜನಾಗಲಿ ಉಳಿಯುವುದು ಸಾಧ್ಯವೇ? ಬೃಹಸ್ಪತಿಯು ಜ್ಞಾನ ಸಾಗರ. ನಾನು ಅವರನ್ನು ಗೌರವಿಸದೆ ಎಂತಹ ಮೂರ್ಖತನ ಮಾಡಿದೆ? ಈಗ ಅವರ ಪಾದಗಳ ಮೇಲೆ ಬಿದ್ದು, ಅವರ ಕ್ಷಮೆಯನ್ನು ಪಡೆದುಕೊಂಡು, ದೇವಲೋಕವನ್ನು ರಕ್ಷಿಸಿಕೊಳ್ಳಬೇಕು' ಎಂದು ಎಲ್ಲರ ಮುಂದೆಯೇ ಹೇಳಿ ಕೊಂಡು ದುಃಖಿಸಿದ.

ಸಭೆಯಲ್ಲಿ ದೇವೇಂದ್ರನು ಹೀಗೆ ಹೇಳುತ್ತಿರುವಾಗಲೇ ಬೃಹಸ್ಪತಿ ಆಚಾರ್ಯರು ತಮ್ಮ ನಿವಾಸದಿಂದ ಹೊರ ಬಂದು ಯೋಗ ಬಲದಿಂದ ಅಂತರ್ಧಾನರಾದರು. ದೇವೇಂದ್ರನು ಬೃಹಸ್ಪತಿ ಆಚಾರ್ಯರ ಮನೆಗೆ ಬಂದು. ಅವರಿಗಾಗಿ ಎಲ್ಲ ಕಡೆ ಹುಡುಕಿಸಿದ. ತಾನೇ ಹಲವು ಸ್ಥಳಗಳಿಗೆ ಹೋಗಿ ಬಂದ. ಆದರೆ ಗುರುಗಳು ಎಲ್ಲೂ ಕಾಣಿಸಲಿಲ್ಲ.

ಗುರು ಹೀನನಾಗಿ ತಾನು ಸುರಕ್ಷಿತನಾಗಿರುವುದು ಸಾಧ್ಯವಿಲ್ಲ ಎಂಬುದು ಅವನಿಗೆ ಸ್ಫುರಿಸಿತು. ಇತರ ದೇವತೆಗಳೊಂದಿಗೆ ಸ್ವರ್ಗಲೋಕದ ರಕ್ಷಣೆಯ ಬಗ್ಗೆ ಸಮಾಲೋಚನೆಯನ್ನು ಪ್ರಾರಂಭಿಸಿದ. ಅವರ್‍ಯಾರಿಗೂ ಒಂದು ಯೋಚನೆಯೂ ಹೊಳೆಯಲೇ ಇಲ್ಲ. ಇದರಿಂದ ಇಂದ್ರನ ಮನ ಅಶಾಂತಿಯ ಸಾಗರವಾಯಿತು.

ಬೃಹಸ್ಪತಿಯು ಇಂದ್ರನಿಂದ ದೂರವಾಗಿರುವುದು, ಇಂದ್ರನು ಇನ್ನೊಬ್ಬ ಗುರುವಿಗಾಗಿ ಹುಡುಕುತ್ತಿರುವುದು ರಹಸ್ಯವಾಗಿ ಉಳಿಯಲಿಲ್ಲ. ದೈತ್ಯರಿಗೂ ಈ ಸುದ್ದಿ ತಿಳಿಯಿತು. ಇದರಿಂದ ಉತ್ಸಾಹಿತರಾದ ದೈತ್ಯರು ತಮ್ಮ ಗುರು ಶುಕ್ರಾಚಾರ್ಯರ ಮಾರ್ಗದರ್ಶನದಲ್ಲಿ ದೇವತೆಗಳನ್ನು ಗೆಲ್ಲಬೇಕೆಂದು ಧಾಳಿಯನ್ನು ಪ್ರಾರಂಭಿಸಿದರು. ಈ ಬಾರಿ ಯುದ್ಧದಲ್ಲಿ ದೇವತೆಗಳು ಬಹುವಾಗಿ ಕಷ್ಟ ನಷ್ಟಗಳನ್ನು ಅನುಭವಿಸಿದರು. ಅನ್ಯ ದಿಕ್ಕುಗಾಣದೆ ದೇವತೆಗಳು ಮಾರ್ಗ ದರ್ಶನಕ್ಕಾಗಿ ಬ್ರಹ್ಮನ ಶರಣು ಹೋದರು.

**ತಾತನ ಹಿತವಚನ**

ಬ್ರಹ್ಮನು ದೇವತೆಗಳ ದುರ್ದೆಶೆಯನ್ನು ಕಂಡು ಮರುಗಿದ. ದೇವತೆಗಳಲ್ಲಿ ಧೈರ್ಯ ತುಂಬುವ ಕೆಲವು ಮಾತುಗಳನ್ನು ಹೇಳಿದ ನಂತರ ಇಂತು ಹೇಳಿದ : "ವೇದಜ್ಞ, ಬ್ರಹ್ಮಜ್ಞಾನಿ, ಶ್ರೇಷ್ಠ ಬ್ರಾಹ್ಮಣನಾದ ಬೃಹಸ್ಪತಿಯನ್ನು ತಿರಸ್ಕಾರದಿಂದ ಕಂಡದ್ದರ ಫಲವಾಗಿ ಇಂದು ಸಂಮೃದ್ಧರಾಗಿದ್ದೂ ಸೋಲನ್ನು ಒಪ್ಪಿಕೊಂಡು ದೈನ್ಯರಾಗಿನಿಲ್ಲುವ ಸ್ಥಿತಿಗೆ ನೀವು ಜಾರಿದ್ದೀರಿ. ದೇವೇಂದ್ರ, ನಿನ್ನ ಶತ್ರುಗಳಾದ ದೈತ್ಯರು ಮೊದಲಿಗೆ ತಮ್ಮ ಗುರು ಶುಕ್ರಾಚಾರ್ಯರನ್ನು ತಿರಸ್ಕರಿಸಿದ್ದರ ಫಲವಾಗಿ ಅತ್ಯಂತ ದುರ್ಬಲರಾಗಿದ್ದರು. ಅವರನ್ನು ಈಗ ಭಕ್ತಿ - ಶ್ರದ್ಧೆಗಳಿಂದ ಪೂಜಿಸಿ, ಆರಾಧಿಸಿ ಅವರ ನೇತೃತ್ವದಲ್ಲಿ ಧನ - ಜನ ಸಂಪತ್ತನ್ನು ಗಳಿಸಿಕೊಂಡು ವಿಜಯ ಲಕ್ಷ್ಮಿಯನ್ನು ವಶಪಡಿಸಿಕೊಳ್ಳುವ ಹಾದಿಯಲ್ಲಿದ್ದಾರೆ. ಇದೇ ರೀತಿಯಾಗಿ ಅವರು ಮುಂದುವರಿದರೆ ಇನ್ನು ಕೆಲವೇ ದಿನಗಳಲ್ಲಿ ಬ್ರಹ್ಮಲೋಕವನ್ನೂ ತಮ್ಮ ವಶವರ್ತಿಯನ್ನಾಗಿ ಮಾಡಿಕೊಳ್ಳುತ್ತಾರೇನೋ ಎಂಬ ಭಯ ನನಗುಂಟಾಗುತ್ತಿದೆ. ಶುಕ್ರಾಚಾರ್ಯರು ದೈತ್ಯರಿಗೆ ರಾಜ್ಯಶಾಸ್ತ್ರವನ್ನೆಲ್ಲಾ ಚೆನ್ನಾಗಿ ಬೋಧಿಸಿದ್ದಾರೆ. ಆದ್ದರಿಂದ ಅವರು ಯಾವ ರೀತಿ ಮುಂದುವರೆಯುತ್ತಾರೆ ಎಂಬುದನ್ನು ನೀವು ಯಾರೂ ಮೊದಲೇ ಅರಿತುಕೊಳ್ಳುವುದು ಸಾಧ್ಯವಿಲ್ಲ. ಅವರೆಲ್ಲರೂ ಈಗ ಬಹು ರಹಸ್ಯಾತ್ಮಕವಾಗಿ ವರ್ತಿಸುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿ ಅವರಿಗೆ ಸ್ವರ್ಗ ಲೋಕವನ್ನು ವಶಪಡಿಸಿಕೊಳ್ಳುವ ಕೆಲಸವು ಯಾವ ದೊಡ್ಡದು? ಗೆಲ್ಲಬೇಕೆಂದು ಬಯಸಿದ ಲೋಕವನ್ನು ಗೆಲ್ಲುವಂತಹ ಸಾಮರ್ಥ್ಯವು ಈಗ ಅವರಲ್ಲಿ ಇದೆ. ಯಾರು ತನ್ನನ್ನು ರಕ್ಷಿಸಿಕೊಂಡು ತನ್ನನ್ನು ನಂಬಿದವರನ್ನೂ ರಕ್ಷಿಸುವನೋ, ಬ್ರಾಹ್ಮಣರನ್ನು, ಗುರುಗಳನ್ನು, ಗೋವುಗಳನ್ನು ಯಾರು ತಮ್ಮ ಸರ್ವಸ್ವವೆಂದು ನಂಬಿರುತ್ತಾರೆಯೋ, ಯಾರ ಬಗ್ಗೆ ಈ ಮುವ್ವರ ಕರುಣಾಕಟಾಕ್ಷವಿರುತ್ತದೆಯೋ ಅವರಿಗೆ ಕೆಟ್ಟದ್ದಾಗುವುದೇ ಇಲ್ಲ. ಆದರೆ ಈಗ ನಿಮಗೆ ಗುರುವೇ ಇಲ್ಲ. ಆದ್ದರಿಂದ ನಿಮ್ಮ ರಕ್ಷಣೆಗಾಗಿ ತಪಸ್ಸು ಮಾಡುವವರು, ಸಂಕಟ ಕಾಲದಲ್ಲಿ ನಿಮಗೆ ಆಸರೆ ನೀಡಿ ಮಾರ್ಗದರ್ಶನ ಮಾಡಿ ನಿಮ್ಮ ರಕ್ಷಕರಾಗುವವರು ಯಾರೂ ಇಲ್ಲ. ನಿಮಗೆ ಖಂಡಿತವಾಗಿಯೂ ಗುರು ಒಬ್ಬ ಬೇಕೇಬೇಕು. ಈಗ ನಿಮಗೆ ಉಳಿದಿರುವುದು ಒಂದೇ ದಾರಿ. ಕೂಡಲೇ ನೀವು ತ್ವಷ್ಟ್ರ ಪುತ್ರನಾದ ವಿಶ್ವರೂಪಾಚಾರ್ಯನನ್ನು ಆಶ್ರಯಿಸಬೇಕು. ಆತನು ಸದ್ವಿಪ್ರ ಹಾಗೆಂದರೆ ತನ್ನನ್ನು ನಂಬಿ ಬಂದವರನ್ನು ರಕ್ಷಿಸುವಂತಹ ಸದ್ಬ್ರಾಹ್ಮಣ. ಮಹಾ ತಪಸ್ವಿ, ಬಹುವಾದ ತಾಳ್ಮೆಯಿರುವ ಶಾಂತ ಸ್ವಭಾವದ ಸಜ್ಜನ. ಆತನು ಭೃಗು ವಂಶದವನು. ಆ ಶುಕ್ರಾಚಾರ್ಯರ ಮೊಮ್ಮಗ. ಆದ್ದರಿಂದ ಶುಕ್ರಾಚಾರ್ಯರ ಸಕಲ ವಿದ್ಯೆಗಳನ್ನು ವಿಶ್ವರೂಪಾಚಾರ್ಯನೂ ತಿಳಿದಿದ್ದಾನೆ. ದೈತ್ಯರ ಮಾರ್ಗವನ್ನು ಸುಲಭವಾಗಿ ಗ್ರಹಿಸಬಲ್ಲ ಶಕ್ತಿ, ಅದಕ್ಕೆ ತಿರುಗೇಟು ನೀಡಬಲ್ಲ ಸಾಮರ್ಥ್ಯ

ಆತನೊಬ್ಬನಿಗೆ ಮಾತ್ರವೇ ಉಂಟು. ದೈತ್ಯರ ಬಗ್ಗೆ ಆತನಿಗೆ ಸಹಾನುಭೂತಿ ಉಂಟು. ಅವರ ಬಗ್ಗೆ ಮಮತೆ ಉಂಟು. ಅದನ್ನು ಮಾತ್ರ ನೀವು ಸಹಿಸಿಕೊಂಡರೆ ಉಳಿದೆಲ್ಲ ಕೆಲಸಗಳನ್ನೂ ಆತನು ನಿಮಗಾಗಿ ಮಾಡಿಕೊಡಬಲ್ಲ".

ಈ ಮಾತನ್ನು ಕೇಳಿದ ದೇವೇಂದ್ರ ಮತ್ತು ದೇವತೆಗಳಿಗೆ ತುಂಬಾ ಸಂತೋಷವಾಯಿತು. ತಮ್ಮ ಆಪತ್ತನ್ನು ನಿವಾರಿಸಬಲ್ಲವರೊಬ್ಬರು ಇದ್ದಾರೆ ಎಂದು ಕೇಳಿದಾಗ ಉಳಿದ ಯಾವುದೂ ಪ್ರಧಾನವಾಗಲಿಲ್ಲ. ಕೂಡಲೇ ಎಲ್ಲರೂ ವಿಶ್ವರೂಪಾಚಾರ್ಯನ್ನು ಕಾಣಲು ಓಡಿದರು.

## ದೇವತೆಗಳ ಗುರು

ವಿಶ್ವರೂಪಾಚಾರ್ಯನು ದೇವತೆಗಳಲ್ಲಿ ವಯಸ್ಸಿನಲ್ಲಿ ಅತ್ಯಂತ ಚಿಕ್ಕವನು. ವಿಶ್ವರೂಪಾಚಾರ್ಯನ ಆಶ್ರಮಕ್ಕೆ ಎಲ್ಲಾ ದೇವತೆಗಳು ಮತ್ತು ದೇವೇಂದ್ರ ಬಂದರು. "ಸ್ವಾಮಿ ವಿಶ್ವರೂಪಾಚಾರ್ಯರೇ, ನಾವಾಗಿಯೇ ನಿಮ್ಮ ಆಶ್ರಮಕ್ಕೆ ಬಂದಿದ್ದೇವೆ. ನಮ್ಮ ಆಶಯವನ್ನು ನೀವು ಪೂರೈಸಿಕೊಡುತ್ತೀರಿ ಎಂಬುದು ನಮ್ಮ ನಂಬಿಕೆ" ಎಂದು ದೇವತೆಗಳು ಬಹು ವಿನೀತರಾಗಿ ಹೇಳಿಕೊಂಡರು. "ಈಗ ನಾವು ದೈತ್ಯರಿಂದ ಸೋಲನ್ನು ಅನುಭವಿಸಿದ್ದೇವೆ. ತಂದೆ ಮತ್ತು ಗುರು ಜನರ ಸೇವೆಯೇ ಎಲ್ಲರ ಬದುಕಿನಲ್ಲೂ ಹಿರಿಯ ಕೆಲಸವಾಗಿರುತ್ತದೆ. ಗುರುವಾದವರು ವೇದಗಳ, ತಂದೆಯು ಬ್ರಹ್ಮದೇವರ, ಸೋದರರು ಇಂದ್ರನ, ತಾಯಿಯು ಭೂದೇವಿಯ, ಸೋದರಿಯು ದಯೆಯ, ಅತಿಥಿಯು ಧರ್ಮದ, ಅಭ್ಯಾಗತರು ಅಗ್ನಿಯ ಮತ್ತು ಜಗತ್ತಿನ ಎಲ್ಲಾ ಪ್ರಾಣಿಗಳು ಆತ್ಮದ ಸಾಕ್ಷಾತ್ ಸ್ವರೂಪರಾಗಿರುತ್ತಾರೆ. ನಿಮಗಿಂತ ಹಿರಿಯರಾಗಿರುವ ನಾವೆಲ್ಲಾ ಪರಾಜಿತರಾಗಿದ್ದೇವೆ. ಎಲ್ಲರೂ ನೋವು – ದುಃಖ – ಸಂಕಟಗಳಿಂದ ಸಂತ್ರಸ್ತರಾಗಿದ್ದೇವೆ. ನಿಮ್ಮ ತಪೋಬಲದಿಂದ ನಮ್ಮೆಲ್ಲರ ಪರಾಜಯ, ದುಃಖ, ನೋವು, ಸಂಕಟಗಳನ್ನೂ ದೂರಮಾಡಿ. ನೀವು ಬ್ರಹ್ಮನಿಷ್ಠರಾದ ಮಹಾಬ್ರಾಹ್ಮಣರು. ತ್ವಷ್ಟ ಬ್ರಹ್ಮನ ವಂಶೋದ್ಭವರಾದ ನೀವು ಜನ್ಮತಃ ನಮ್ಮ ಗುರುಗಳಾಗಿದ್ದೀರಿ. ಈಗ ನಾವೆಲ್ಲರೂ ನಿಮ್ಮನ್ನು ಆಚಾರ್ಯರನ್ನಾಗಿ ವರಣ ಮಾಡುತ್ತಿದ್ದೇವೆ. ನಿಮ್ಮ ತಪೋಬಲದಿಂದ ನಾವೆಲ್ಲರೂ ನಿರಾಯಾಸವಾಗಿ ಶತ್ರುಗಳನ್ನು ಗೆಲ್ಲುವಂತೆ ಮಾಡಿ. ಅವಶ್ಯಕವಾದಾಗ ನಮಗಿಂತಲೂ ವಯಸ್ಸಿನಲ್ಲಿ ಚಿಕ್ಕವರಾಗಿರುವವರ ಪಾದಕ್ಕೆ ಎರಗುವುದು ತಪ್ಪಲ್ಲ. ಆದ್ದರಿಂದ ನೀವು ನಮಗೆ ಆಚಾರ್ಯರಾಗಿರಲು ಯಾವ ಅಡೆ–ತಡೆಗಳೂ ಇಲ್ಲ. ನಿಜ ಹೇಳಬೇಕೆಂದರೆ ಶಿಲ್ಪಕರ್ಮ–ಬ್ರಹ್ಮಕರ್ಮಗಳಿಂದ ಮಾತ್ರವೇ ನೈಜವಾದ ಹಿರಿಮೆಯು ಬರುತ್ತದೆ. ಇತರ ಎಲ್ಲಾ ಹಿರಿಮೆಗಳೂ ಕೇವಲ ನಾಮ ಮಾತ್ರವಾದುವು" ಎಂದು ದೇವತೆಗಳು ಬಗೆ ಬಗೆಯಲ್ಲಿ ವಿನಂತಿಸಿಕೊಂಡರು.

ದೇವತೆಗಳ ಈ ಮಾತುಗಳಿಂದ ಸಂಕೋಚಗೊಂಡ ಪರಮ ತಪಸ್ವಿಯಾದ ವಿಶ್ವರೂಪಾಚಾರ್ಯನು ಗಂಭೀರವಾಗಿ ಇಂತು ಹೇಳಿದನು : "ಕಿರಿಯನ ಮೇಲೆ ನೀವಿರಿಸಿರುವ ಮಮತೆ, ವಾತ್ಸಲ್ಯಗಳಿಗೆ ನಾನು ಸದಾ ಕೃತಜ್ಞ. ಪೌರೋಹಿತ್ಯ ಕಾರ್ಯವು ಶೋಭಾಯಮಾನವಾದುದಲ್ಲ ಎಂಬುದು ತಮಗೆ ಗೊತ್ತಿರುವ ವಿಷಯವೇ! ಪೌರೋಹಿತ್ಯ ಕರ್ಮದಿಂದ ಬ್ರಹ್ಮತೇಜವು ನಶಿಸುತ್ತದೆ. ಆದ್ದರಿಂದಲೇ ಧರ್ಮಜ್ಞರಾದ ಹಿರಿಯರು ಪುರೋಹಿತ ಕರ್ಮವು ನಿಂದನೀಯ ಎಂದು ಹೇಳಿದ್ದಾರೆ. ಆದರೆ ತಾವು ಲೋಕೇಶ್ವರರಾಗಿದ್ದೂ ಕಿರಿಯರನನ್ನು ಹೀಗೆ ಪ್ರಾರ್ಥಿಸುತ್ತಿರುವಾಗ ನಾನೇನೆಂದು ಉತ್ತರ ಹೇಳಲಿ? ನಿಮ್ಮೆಲ್ಲರ ಮಾತನ್ನು ನಿರ್ದಾಕ್ಷಿಣ್ಯವಾಗಿ ಹೇಗೆ ತಾನೇ ತಳ್ಳಿ ಹಾಕಲಿ? ನಾನು ಕಿರಿಯ. ನಿಮ್ಮ ಮಾತನ್ನು ಪಾಲಿಸಬೇಕಾದವನು. ನಿಮ್ಮ ಆಜ್ಞೆಯೇ ನನ್ನ ಕರ್ತವ್ಯ. ನಾನು ಏನನ್ನೂ ಸ್ವೀಕರಿಸಿ – ಸಂಗ್ರಹಿಸುವ ರೂಢಿ ಇರಿಸಿಕೊಂಡಿಲ್ಲ. ಇರುವಷ್ಟರಲ್ಲಿ, ದೊರೆತಷ್ಟರಲ್ಲಿ ದೇವ–ಪಿತೃಕಾರ್ಯಗಳನ್ನು ನೆರವೇರಿಸುತ್ತೇನೆ. ಆದ್ದರಿಂದ ನನ್ನ ಬದುಕು ಹೇಗೋ ಸಾಗುತ್ತಿದೆ. ಅದಕ್ಕಾಗಿ ಇನ್ನೊಂದು ವೃತ್ತಿಯ ಅವಶ್ಯಕತೆ ನನಗಿಲ್ಲ. ಪೌರೋಹಿತ್ಯವನ್ನು ವೃತ್ತಿ ಎಂದು ನಾನೇಕೆ ಭಾವಿಸಬೇಕು? ಆದರೆ ನೀವೆಲ್ಲಾ ನಾನು ಯಾವ ಕೆಲಸವನ್ನು ಮಾಡಬೇಕೆಂದು ಒತ್ತಾಯದಿಂದ ಹೇಳುತ್ತಿದ್ದೀರೋ ಆ ಕೆಲಸ ಮಾತ್ರ ನಿಂದೆಗೆ ಅರ್ಹವಾದುದು. ನನ್ನಂತಹವರು ಮಾಡಲು ಅನರ್ಹವಾದುದು. ಆದರೂ ಇಷ್ಟೊಂದು ಮಂದಿ ಹಿರಿಯರು ಕೂಡಿ ಬಂದು ಕೇಳಿದಾಗ ನಾನು ನಿರಾಕರಿಸಲು ನನ್ನ ಮನಸ್ಸು ಅಂಗೀಕರಿಸುತ್ತಿಲ್ಲ. ಇದಕ್ಕೆ ಪ್ರತಿಯಾಗಿ ನಿಮ್ಮ ಕೋರಿಕೆಯು ನನ್ನ ಪ್ರಾಣಕ್ಕಿಂತಲೂ ಮಿಗಿಲಾದುದು. **ಸಂತೋಷಂ ಜನಯೇತ್ ಪ್ರಾಜ್ಞಃ। ತದೇವೇಶ್ವರ ಪೂಜನಂ।** ತಮ್ಮಂತಹ ಪ್ರಾಜ್ಞರನ್ನು ಸಂತೋಷ ಗೊಳಿಸುವುದೇ ಭಗವತ್ಸೇವೆ. ಇದಕ್ಕಿಂತಲೂ ಮಿಗಿಲಾದ ಈಶ ಸೇವೆ ಬೇರಿಲ್ಲ. ಆದ್ದರಿಂದ ತಾವು ಹೇಳಿದಂತೆ ನಡೆಯುವುದು ನನ್ನ ಭಾಗ್ಯ ಎಂದುಕೊಂಡಿದ್ದೇನೆ. ತಾವು ಹೇಳಿದ ಕೆಲಸವನ್ನು ಮಾಡುವುದರಲ್ಲಿ ತನು – ಮನ – ಧನವನ್ನೂ ನನ್ನ ಸರ್ವಸ್ವವನ್ನೂ ತೊಡಗಿಸಿ ಪೂರೈಸುತ್ತೇನೆ".

## ನಾರಾಯಣ ಕವಚದ ಉಪದೇಶ

ವಿಶ್ವರೂಪಾಚಾರ್ಯನು ಶ್ರೇಷ್ಠ ತಪಸ್ವಿ. ದೇವತೆಗಳು ಆತನನ್ನು ಆಚಾರ್ಯನನ್ನಾಗಿ ವರಣ ಮಾಡಿದ ನಂತರ ತುಂಬಾ ಶ್ರದ್ಧೆಯಿಂದ ಪೌರೋಹಿತ್ಯ ಕರ್ಮವನ್ನು ಮಾಡತೊಡಗಿದರು.

ಶುಕ್ರಾಚಾರ್ಯರು ತಮ್ಮ ನೀತಿ ಬಲದಿಂದ ಆ ದೈತ್ಯರ ಸಂಪತ್ತನ್ನು ಸುರಕ್ಷಿತ ಗೊಳಿಸಿದ್ದರು. ಇದನ್ನು ಗ್ರಹಿಸಿದ ವಿಶ್ವರೂಪಾಚಾರ್ಯ ತನ್ನ ತಪೋಬಲದಿಂದ ವೈಷ್ಣವೀ ವಿದ್ಯೆಯ ಪ್ರಭಾವದಿಂದ ಇಂದ್ರನನ್ನು ಬಲಶಾಲಿಯನ್ನಾಗಿ ಮಾಡಿ ಅಸುರರನ್ನು ಜಯಿಸುವಂತೆ ಮಾಡಿದ. ಇದಕ್ಕೆ ಕಾರಣ ವಿಶ್ವರೂಪಾಚಾರ್ಯನ ಉದಾರ ಬುದ್ಧಿಯೇ. ಇಂದ್ರನಿಗೆ ***ನಾರಾಯಣಕವಚ***ವನ್ನು ಉಪದೇಶಿಸಿದ. ಇದು ಇತರ ಕವಚಗಳಂತೆಯೇ ಲೋಹದಲ್ಲಿ ತಯಾರಿಸಲಾಗಿತ್ತು. ಇದರ ಗುರಿ ಹೊರ ಮೈರಕ್ಷಣೆ. ಅಂತರಂಗ ರಕ್ಷಣೆಗೆ ಮಂತ್ರಯುಕ್ತವಾದ ಕವಚವನ್ನು ಜಪದಿಂದ ಧರಿಸಬೇಕು. ಆಗ ವೈಷ್ಣವೀ ಶಕ್ತಿಯು ಆ ದೇಹಿಯನ್ನು ಎಲ್ಲಾ ಕಡೆಗಳಿಂದಲೂ ಭದ್ರವಾಗಿ ಕಾಯುತ್ತದೆ.

"ದೇವೇಂದ್ರ, ನೀವು ಈ *ನಾರಾಯಣ ಕವಚವನ್ನು* ಸಮಂತ್ರಕವಾಗಿ ಧರಿಸಿದರೆ ನಂತರ ಶತ್ರುವನ್ನು ಜಯಿಸುವುದು ಅತ್ಯಂತ ಸುಲಭದ ಕೆಲಸ. ಈ ಕವಚಧಾರಿ ಪುರುಷ ಯಾವ ಶತ್ರುವನ್ನು ನೋಡಿದರೂ, ಅಥವಾ ಕಾಲಿನಿಂದ ಸ್ಪರ್ಶಿಸಿದರೂ ಅವನು ಕೂಡಲೇ ಭಸ್ಮವಾಗುತ್ತಾನೆ. ಈ ವೈಷ್ಣವೀ ವಿದ್ಯೆಯನ್ನು ಸಿದ್ಧಿಸಿಕೊಂಡವರಿಗೆ ರಾಜನಾಗಲಿ – ಕಳ್ಳನಾಗಲಿ, ಪ್ರೇತ – ಪಿಶಾಚಗಳಾಗಲಿ, ಹುಲಿ – ಚಿರತೆಗಳಾಗಲಿ ಯಾವ ರೀತಿಯ ಭಯವನ್ನೂ, ನಷ್ಟವನ್ನೂ ಉಂಟು ಮಾಡಲಾರವು. ಇದು ಪ್ರಾಚೀನ ಕಾಲದ ಉದಂತ. ಕೌಶಿಕ, ಗೋತ್ರದ ಬ್ರಾಹ್ಮಣನೊಬ್ಬ ಈ ಮಂತ್ರವನ್ನು ಸಿದ್ಧಿಮಾಡಿಕೊಂಡಿದ್ದ. ಯೋಗ ಸಾಧನೆಯಿಂದ ಮರುಭೂಮಿಯಲ್ಲಿ ತನ್ನ ದೇಹವನ್ನು ತ್ಯಾಗ ಮಾಡಿದ. ಈ ಘಟನೆಯ ತರುವಾಯ ಹಲವು ವರ್ಷಗಳಿಗೆ ಚಿತ್ರರಥನೆಂಬ ಗಂಧರ್ವನು ತನ್ನ ಪತ್ನಿಯರೊಂದಿಗೆ ತನ್ನ ವಿಮಾನದಲ್ಲಿ ಹೋಗುತ್ತಿದ್ದ. ಆ ವಿಮಾನವು ಮರುಭೂಮಿಯ ಆ ಸ್ಥಳಕ್ಕೆ ಬರುತ್ತಲೇ ತಲೆಕೆಳಗಾಗಿ ಕೆಳಕ್ಕೆ ಉರುಳಿಬಿತ್ತು. ಇದು ಆ ಗಂಧರ್ವನಿಗೆ ಆಶ್ಚರ್ಯಕರವಾಗಿ ತೋರಿತು. ಬಳಿಯಲ್ಲಿದ್ದ ವಾಲಖಿಲ್ಯಮುನಿಗಳನ್ನು ಈ ಬಗ್ಗೆ ಪ್ರಶ್ನಿಸಿದಾಗ 'ನಾರಾಯಣಕವಚಧಾರಿ ಬ್ರಾಹ್ಮಣನ ಅಸ್ಥಿಗಳು ಅಲ್ಲಿ ಉಳಿದಿರುವುದರ ಪ್ರಭಾವದಿಂದ ವಿಮಾನ ನೆಲಕ್ಕೆ ಉರುಳಿದೆ' ಎಂದು ಹೇಳಿದರು. ಚಿತ್ರರಥನು ಆ ಬ್ರಾಹ್ಮಣನ ಅಸ್ಥಿಗಳನ್ನು ಸಂಗ್ರಹಿಸಿ ಪೂರ್ವ ವಾಹಿನಿಯಾದ ಸರಸ್ವತಿಯಲ್ಲಿ ವಿಸರ್ಜಿಸಿ ಸ್ನಾನಾನಂತರ ತನ್ನ ಲೋಕವನ್ನು ಸೇರಿಕೊಂಡ" ಎಂದು ವಿಶ್ವರೂಪಾಚಾರ್ಯನು ನಾರಾಯಣಕವಚದ ಪ್ರಭಾವವನ್ನು ವಿವರಿಸಿದನು.

ಪ್ರಳಯದಂತೆ ಆವರಿಸಿದ್ದ ಸೋಲಿನ ಕಾರ್ಮೋಡವು ನಿರಾಯಾಸವಾಗಿ ಕರಗಿತು. ಸ್ವರ್ಗದಲ್ಲಿ ಆವರಿಸಿದ್ದ ಭಯದ ವಾತಾವರಣ ಅರೆಕ್ಷಣದಲ್ಲಿ ದೂರವಾಯಿತು. ಇಂದ್ರ ಈಗ ದೈತ್ಯರನ್ನು ಮರೆತ. ಅವರಿಂದ ಇನ್ನು ಕೆಡುಕುಂಟಾಗುವುದು ಸಾಧ್ಯವಿಲ್ಲ ಎಂಬುದನ್ನು ಖಚಿತಗೊಳಿಸಿಕೊಂಡಿದ್ದ.

ತ್ವಷ್ಟ ಬ್ರಹ್ಮನು ದೇವನಾಗಿದ್ದರೂ, ವಿಶ್ವರೂಪಾಚಾರ್ಯನ ತಾಯಿ ವೈರೋಚನಿ (ರಚನೆ) ಅಸುರ ಸ್ತ್ರೀ. ಆದ್ದರಿಂದ ವಿಶ್ವರೂಪಾಚಾರ್ಯನಿಗೆ ದೇವ ಅಸುರರ ಮಧ್ಯೆ ಅಂತರವಿರಲಿಲ್ಲ. ಇಬ್ಬರೂ ಸುಖ ಸಂಮೃದ್ಧಿಗಳಿಂದ ಇರಬೇಕೆಂಬುದು ಆತನ ಬಯಕೆ. ಬ್ರಹ್ಮದೇವರೇ ಈ ವಿಷಯವನ್ನು ದೇವೇಂದ್ರನಿಗೆ ಮೊದಲೇ ಹೇಳಿದ್ದರು. ಆಪತ್ತಿನಲ್ಲಿ ಇಂದ್ರನು ಈ ಮಾತನ್ನು ಗಮನಿಸಿರಲಿಲ್ಲ. ಆಗ ನೆರವಿಗೆ ಬೇರೆ ಯಾರು ತಾನೇ ದೊರೆಯುತ್ತಿದ್ದರು? ಈಗ ಅಂತಹ ತೊಂದರೆ ಇಲ್ಲ. ಆದರೆ ವಿಶ್ವರೂಪಚಾರ್ಯನ ಅಸುರ ಪ್ರೀತಿ ಇಂದ್ರನಿಗೆ ಸರಿ ಎನಿಸಲಿಲ್ಲ. ಇಂತಹ ಗುರುವಿನಿಂದ ದೇವತೆಗಳ ಸಾರ್ವಭೌಮತ್ವ ಸಾಧಿತವಾಗದು ಎಂಬುದನ್ನು ದೇವೇಂದ್ರ ಖಚಿತವಾಗಿ ಭಾವಿಸಿದ. ಈತನನ್ನು ಜೀವಂತವಾಗಿ ಬಿಟ್ಟರೆ ಅಸುರರಿಗೆ ನೆರವಾಗಿ ನಿಲ್ಲುವನೇನೋ ಎಂಬ ಆತಂಕ. ಆದ್ದರಿಂದ ವಿಶ್ವರೂಪಾಚಾರ್ಯನನ್ನು ವಧಿಸುವುದೊಂದೇ ತನಗಿರುವ ದಾರಿ ಎಂಬುದಾಗಿ ಇಂದ್ರನು ತೀರ್ಮಾನಿಸಿದ. ಈ ತೀರ್ಮಾನದ ನಂತರ ಆಚಾರ್ಯರನ್ನು ಕೊಲ್ಲಲು ಹೆಚ್ಚು ಕಾಲ ಬೇಕಾಗಿರಲಿಲ್ಲ. ಯಜ್ಞವನ್ನು ಮಾಡಿಸುತ್ತಿರುವಾಗಲೇ ಆಚಾರ್ಯರ ಮೂರು ತಲೆಗಳನ್ನು ಒಮ್ಮೆಗೇಲೇ ಕತ್ತರಿಸಿ ಹಾಕಿದ. ಒಂದು ಕಡೆ ತಪಶ್ಶಕ್ತಿಯ ಹರಣ, ಇನ್ನೊಂದು ಕಡೆ ಪ್ರಾಣಹರಣ ನಡೆದು ದೇವತೆಗಳ ಕೋರಿಕೆಯು ನಿಜವಾಗಿಯೂ ವಿಶ್ವರೂಪಾಚಾರ್ಯರ ಪ್ರಾಣಕ್ಕಿಂತಲೂ ಮಿಗಿಲಾದ ಬೆಲೆಯುಳ್ಳ ದ್ದಾಯಿತು!

## ತ್ವಷ್ಟ ಬ್ರಹ್ಮನ ಕೋಪ

ಬಹು ಸಾತ್ವಿಕನು, ನಿಷ್ಠಾವಂತ ಬ್ರಾಹ್ಮಣನೂ ಆಗಿದ್ದ ಮಗನನ್ನು ಇಂದ್ರನು ಕೊಂದದ್ದು ತ್ವಷ್ಟ ಬ್ರಹ್ಮನಿಗೆ ತೀರಾ ಅನ್ಯಾಯವಾಗಿ ಕಂಡಿತು. ಆಶ್ರಮದಲ್ಲಿದ್ದು ಕೊಂಡು ಬ್ರಹ್ಮಕರ್ಮ – ಶಿಲ್ಪಕರ್ಮಗಳ ಅನುಷ್ಠಾನ ಮಾಡಿಕೊಂಡು, ವಿದ್ಯಾರ್ಥಿಗಳಿಗೆ ಪಾಠವನ್ನು ಹೇಳಿಕೊಂಡು ತನ್ನಷ್ಟಕ್ಕೆ ತಾನು ಇದ್ದವನನ್ನು ಆಚಾರ್ಯನಾಗಿ ವರಣಮಾಡಿದ್ದೇಕೆ? ನಂತರ ಆತನನ್ನು ಅನುಮಾನಿಸಿ ಕೊಂದದ್ದೇಕೆ? ತ್ವಷ್ಟವಿನ ಕೋಪವು ತಡೆಯಲಾರದಷ್ಟಿತ್ತು. ಇಂದ್ರನನ್ನು ಕೊಲ್ಲಬೇಕೆನ್ನುವಷ್ಟು ತೀವ್ರವಾದ ಕೋಪ.

ಬ್ರಹ್ಮನಾಗಿದ್ದುದರಿಂದ ಇಂದ್ರನನ್ನು ಕೊಲ್ಲುವಂತಹವನನ್ನು ರೂಪಿಸಿದರೆ ಸಾಕು. ತಾನೇ ನೇರವಾಗಿ ಇಂದ್ರನ ಮೇಲೆರಗಿಕೊಲ್ಲುವ ಅವಶ್ಯಕತೆ ಇರಲಿಲ್ಲ. ಇದಕ್ಕಾಗಿ ತ್ವಷ್ಟ ಬ್ರಹ್ಮನು ಒಂದು ವಿಶೇಷ ಯಜ್ಞವನ್ನೇ ಆಚರಿಸಿದ. 'ಇಂದ್ರ ಶತ್ರುವೇ ನೀನು ಶೀಘ್ರಾತಿಶೀಘ್ರಗತಿಯಲ್ಲಿ ವರ್ಧಿಸಿ ನಿನ್ನ ಶತ್ರುವನ್ನು ನಾಶಮಾಡು' **(ಇಂದ್ರ ಶತ್ರುರ್ವರ್ಧಸ್ವ)** ಎಂಬ ಮಂತ್ರದಿಂದ ಹವಿಸ್ಸನ್ನು ಅರ್ಪಿಸಿದ. ಕೋಪಾವೇಶದಲ್ಲಿ ಮಂತ್ರವನ್ನು ಹೇಳುವ ಸ್ವರದಲ್ಲಿ ದೋಷ ಉಂಟಾಗಿ 'ಇಂದ್ರನಿಂದ ನಾಶವಾಗುವಂತಹ ಶತ್ರುವು ವರ್ಧಿಸಲಿ' ಎಂಬ ಅರ್ಥ ಉಂಟಾಯಿತು.* ಇದನ್ನು ತ್ವಷ್ಟ ಬ್ರಹ್ಮನು ಆಗ ಗಮನಿಸಲಿಲ್ಲ. ಯಜ್ಞದ ಸಮಾಪ್ತಿ ಕಾಲದಲ್ಲಿ ಅನ್ವಾಹಾರ್ಯ ಪಚನವೆಂಬ ಅಗ್ನಿಯಲ್ಲಿ ಬಹು ಭಯಂಕರನಾಗಿ ಕಾಣಿಸುವ ಬೃಹತ್ ಕಾಯದವನೊಬ್ಬ ಕಾಣಿಸಿಕೊಂಡ. ಜಗತ್ತುಗಳನ್ನೆಲ್ಲಾ ನಾಶಮಾಡಲೆಂದೇ ಪ್ರಳಯವೇ ವಿಕರಾಳ ರೂಪದಲ್ಲಿ ಕಾಣಿಸಿಕೊಂಡಿದೆ ಎನ್ನುವಂತಿದ್ದ. ಅವನ ದೇಹವು ಸುತ್ತಲೂ ದಿನವೊಂದಕ್ಕೆ ಒಂದು ಧನುಸ್ಸಿನಷ್ಟು ದೂರ ಬೆಳೆಯುತ್ತಿತ್ತು. ಸುಟ್ಟು ಕರಕಾಗಿರುವಂತಹ ಬಣ್ಣದ ದೇಹ. ಅವನ ಮೈಯಿಂದ ಸಂಧ್ಯಾಕಾಲದ ಮೇಘಗಳಂತೆ ಕೆಂಪು ಕಾಂತಿ ಹೊರಚಿಮ್ಮುತ್ತಾ ಬೆಂಕಿಯ ಕೆಂಡದಂತೆ ಕಾಣುತ್ತಿದ್ದ. ಅವನ ತಲೆಗೂದಲು, ಮೀಸೆ, ಮೈಮೇಲಣ ಕೂದಲು ಎಲ್ಲಾ ಕೆಂಪಾಗಿ ಕಾದಿದ್ದ ತಾಮ್ರದ ಕಂಬಿಗಳಂತೆ ಹೊಳೆಯುತ್ತಿದ್ದವು. ಅವನ ಕಣ್ಣುಗಳು ಮಧ್ಯಾಹ್ನದ ಸೂರ್ಯನಂತೆ ಬಹು

---

* ವೇದಾಂಗವೆನಿಸಿರುವ ಶಿಕ್ಷಾ ಗ್ರಂಥಗಳಲ್ಲಿ ಇಂದಿಗೂ ಈ ಆಖ್ಯಾಯಿಕೆಯನ್ನು ವೇದ ವಿದ್ಯಾರ್ಥಿಗಳಿಗೆ ಹೇಳಲಾಗುತ್ತದೆ. ವೇದ ಮಂತ್ರಗಳ ಸ್ವರ ತಪ್ಪಬಾರದು. ತಪ್ಪಿದರೆ ಅದರ ಫಲ ಬಹು ತೀವ್ರತರವಾಗಿರುತ್ತದೆ. ಈ ತಪ್ಪಿನ ಫಲವು ತ್ವಷ್ಟ ಬ್ರಹ್ಮನನ್ನೇ ಬಿಡಲಿಲ್ಲ ಎಂದು ಹೇಳಲು ಈ ಆಖ್ಯಾಯಿಕೆಯನ್ನು ಹೇಳುತ್ತಾರೆ. ವೇದ ಸಾಹಿತ್ಯದಲ್ಲಿ ಇದು ಬಹು ಪ್ರಸಿದ್ಧವಾದ ಸಂಗತಿ.

ತೀಕ್ಷ್ಣವಾಗಿದ್ದವು. ತ್ರಿಶೂಲವನ್ನು ಹಿಡಿದು ಕುಣಿದು – ಕುಪ್ಪಳಿಸುತ್ತಾ ಕಿರುಚುವಾಗ ಭೂಮಿಯೇ ನಡುಗುತ್ತಿತ್ತು. ತನ್ನ ತ್ರಿಶೂಲದಿಂದಲೇ ಆಕಾಶವನ್ನು ಹಿಡಿದು ನಿಲ್ಲಿಸಿದ್ದಾನೇನೋ ಎಂಬ ಅನುಮಾನವಾಗುತ್ತಿತ್ತು. ಅವನು ಆಕಳಿಸಿದಾಗ ಸಾಗರವೇ ಬಾಯ್ತೆರೆದಿರುವಂತೆ ಕಾಣಿಸುತ್ತಿತ್ತು. ತನ್ನ ನಾಲಿಗೆಯಿಂದ ನಕ್ಷತ್ರಗಳನ್ನೆಲ್ಲಾ ನೆಕ್ಕಿ ಬಿಡುತ್ತಾನೇನೋ ಎಂಬ ಅನುಮಾನ ಉಂಟಾಗುತ್ತಿತ್ತು. ಭಯಂಕರವಾದ ಕೋರೆಯ ಹಲ್ಲುಗಳು, ತೆರೆದ ಬಾಯಲ್ಲಿ ಮೂರು ಲೋಕಗಳನ್ನು ನುಂಗುವನೇನೋ ಎಂಬ ಆತಂಕ ಮೂಡುತ್ತಿತ್ತು. ಅವನನ್ನು ಕಂಡವರು ಭಯ ಭೀತರಾಗಿ ಅತ್ತಿತ್ತ ಓಡತೊಡಗಿದರು.

ಅವನು ತ್ವಷ್ಟ ಬ್ರಹ್ಮನ ಕೋಪದ ಸಾಕಾರ ಮೂರ್ತಿಯಾಗಿದ್ದ. ಈ ಪುತ್ರನು ಎಲ್ಲಾ ಲೋಕಗಳನ್ನು ಆಕ್ರಮಿಸಿದ. ಅವನನ್ನು ವೃತ್ರ ಎಂದು ಕರೆದರು. ಅನೇಕ ದೇವತೆಗಳು ತಮ್ಮ ಅನುಯಾಯಿಗಳೊಂದಿಗೆ ವೃತ್ರನ ಮೇಲೆ ಯುದ್ಧ ಮಾಡತೊಡಗಿದರು. ವೃತ್ರನು ಅವರ ಶಸ್ತ್ರಾಸ್ತ್ರಗಳನ್ನು ನುಂಗಿ ಬಿಟ್ಟ! ದೇವತೆಗಳ ಪ್ರಭಾವವೇ ಶೂನ್ಯವಾಯಿತು. ಅವರೆಲ್ಲರೂ ದೀನರಾಗಿ, ಉದಾಸೀನರಾಗಿ, ಬಳಲಿ ಕುಕ್ಕರಿಸಿದರು.

### ವಿಶ್ವಕರ್ಮನಲ್ಲಿ ದೇವತೆಗಳ ಮೊರೆ

ಎಲ್ಲರೂ ಸೃಷ್ಟಿಕರ್ತನಾದ ವಿಶ್ವಕರ್ಮ ಪರಮಾತ್ಮನನ್ನು ಸ್ಮರಿಸ ತೊಡಗಿದರು. – "ವಾಯು, ಆಕಾಶ, ಅಗ್ನಿ, ಜಲ ಮತ್ತು ಆಕಾಶಗಳೆಂಬ ಪಂಚ ಮಹಾಭೂತಗಳಿಂದ ಎಲ್ಲಾ ಜಗತ್ತುಗಳನ್ನು ಸೃಷ್ಟಿಸಿದವನು. ರುದ್ರ, ವಿಷ್ಣು, ಬ್ರಹ್ಮ, ಇಂದ್ರ, ಸೂರ್ಯರೆಂಬ ಪಂಚ ದೇವತೆಗಳನ್ನು ಸೃಷ್ಟಿಸಿ ಈ ಜಗತ್ತಿನ ವ್ಯಾಪಾರವನ್ನು ನಿರ್ವಹಿಸುತ್ತಿರುವವನೂ, ಸರ್ವಕರ್ಮ ಸಮರ್ಥನೂ, ಸರ್ವಕಾರ್ಯಾಧ್ಯಕ್ಷನೂ ಆಗಿರುವ ಭಗವಾನ್ ವಿಶ್ವಕರ್ಮನೇ ಈ ಲೋಕ ಕಂಟಕನಿಂದ ಲೋಕಗಳನ್ನು ಮತ್ತು ನಮ್ಮನ್ನು ರಕ್ಷಿಸಬೇಕು. ಭಕ್ತರ ಕಾಮಧೇನುವಾಗಿರುವ ಸ್ವಾಮಿಯೇ ನಿನ್ನನ್ನು ತೊರೆದು ಬೇರೆಯವರ ಶರಣು ಹೋದರೆ ನಾಯಿಯ ಬಾಲವನ್ನು ಹಿಡಿದು ಸಾಗರವನ್ನು ದಾಟುವಂತಹ ಸಾಹಸವಾಗುತ್ತದೆ. ಎಲೈ ವಿಶ್ವಕರ್ಮ ಸ್ವಾಮಿಯೇ, ನಮ್ಮನ್ನು ಪ್ರಸ್ತುತ ಪ್ರಳಯದಿಂದ ರಕ್ಷಿಸು. ಸರ್ವತಂತ್ರ ಸ್ವತಂತ್ರನಾಗಿರುವ ಆ ಸ್ವಾಮಿಗೆ ಯಾರ ನೆರವೂ ಬೇಕಾಗಿಲ್ಲ. ಆತನ ಅನುಗ್ರಹದಿಂದ ದೇವತೆಗಳು ಈ ಸೃಷ್ಟಿ – ಸ್ಥಿತಿ–ಲಯ ಮುಂತಾದ ಎಲ್ಲಾ ಕರ್ಮಗಳನ್ನೂ ನಿರ್ವಹಿಸುತ್ತಾರೆ. ನಾನು ಎಂಬ ಅಭಿಮಾನದ ಪೊರೆ ಧರಿಸಿರುವುದರಿಂದ ಆ ದಯಾಳು ಕಾಣಿಸುವುದಿಲ್ಲ. ದೇವತೆಗಳು, ಸಜ್ಜನರು, ಋಷಿಗಳು, ಪಶು–ಪಕ್ಷಿಗಳು ಬಹುವಾಗಿ ಪೀಡಿತರಾಗಿದ್ದಾರೆ ಎಂಬುದನ್ನು ಆ ಸ್ವಾಮಿಯು ಕಂಡು ಅವರ ರಕ್ಷಣೆಗಾಗಿ ಮನುಷ್ಯಾದಿ ಯೋನಿಗಳಲ್ಲಿ ಅವತರಿಸಿ ರಕ್ಷಿಸುವುದು ಹಲವು ಯುಗಗಳಿಂದ ನಡೆಯುತ್ತಿದೆ. ಆತನೇ ಎಲ್ಲರ ಅಂತರಾತ್ಮನಾಗಿದ್ದು ಪರಮಾರಾಧ್ಯ ದೇವನಾಗಿದ್ದಾನೆ. ಆತನೇ ಪ್ರಕೃತಿ – ಪುರುಷ ರೂಪದಲ್ಲಿ ವಿಶ್ವಸೃಷ್ಟಿಗೆ ಕಾರಣನಾಗಿದ್ದಾನೆ. ಆತನು ಈ ಸೃಷ್ಟಿಯಲ್ಲಿ ವ್ಯಾಪಿಸಿಕೊಂಡಿದ್ದು ಪ್ರತ್ಯೇಕವಾಗಿರುವ ಮಹನೀಯ. ಆಶ್ರಿತ ವತ್ಸಲನಾಗಿರುವ ಆ ಪರಮ ಪುರುಷನು ನಮ್ಮನ್ನೆಲ್ಲಾ ಕಾಪಾಡುತ್ತಾನೆ. ಆತನನ್ನೇ ನಂಬಿರುವ ನಮಗೆಲ್ಲಾ ಒಳಿತೇ ಉಂಟಾಗುತ್ತದೆ".

ಹೀಗೆ ದೇವತೆಗಳ ಒಕ್ಕೊರಲ ಪ್ರಾರ್ಥನೆಗೆ ಸೃಷ್ಟಿಕರ್ತನಾದ ವಿಶ್ವಕರ್ಮ ಭಗವಂತನು ಸಾಕ್ಷಾತ್ಕಾರಗೊಂಡ. ಭಗವಂತನನ್ನು ಕಂಡ ದೇವತೆಗಳು ಸಂತೋಷಗೊಂಡರು. ಸಾಷ್ಟಾಂಗ ಪ್ರಣಾಮವನ್ನು ಅರ್ಪಿಸಿದ ದೇವತೆಗಳು ಹೀಗೆ ಹೇಳಿದರು.

"ಯಜ್ಞದಲ್ಲಿ ಸ್ವರ್ಗವನ್ನು ಅನುಗ್ರಹಿಸುವ ಮತ್ತು ಯಜ್ಞಫಲವನ್ನು ಕೊಡುವ ಅಧಿಕಾರ ನಿಮ್ಮದೇ. ಅದಕ್ಕಾಗಿ ನಿಮಗೆ ನಮಸ್ಕಾರ. ಯಜ್ಞಕ್ಕೆ ವಿಘ್ನವನ್ನು ಒಡ್ಡುವವರನ್ನು ತುಂಡರಿಸಿ ಹಾಕುವ ತಮಗೆ ನಾವು ಬಾರಿ ಬಾರಿಗೂ ನಮಸ್ಕರಿಸುತ್ತೇವೆ. ಸೃಷ್ಟಿಯಾದ ಪ್ರಾಣಿಗಳ ಗುಣಾನುಸಾರ ಗತಿಗಳನ್ನುಂಟುಮಾಡುವ, ಋತಶಕ್ತಿಯ ನಿಯಂತ್ರಕರಾಗಿರುವ ನಿಮಗೆ ನಮಸ್ಕಾರ. ನಿಮ್ಮ ಪರಮಪದದ ವಾಸ್ತವಿಕ ಸ್ವರೂಪವನ್ನು ಬುದ್ಧಿ, ಮನಸ್ಸು, ಇಂದ್ರಿಯ ಮುಂತಾದ ಯಾವ ನವೀನ ಅನುಸಂಧಾನಗಳ ಮೂಲಕವೂ ತಿಳಿಯಲು ಸಾಧ್ಯವಿಲ್ಲ. ಏಕೆಂದರೆ ಇದು ಜಗತ್ಕಾರ್ಯ ಮತ್ತು ತಾವು ಇದರ ವಿಧಾತೃವಾಗಿದ್ದೀರಿ. ಭಗವಾನ್ ವಿಶ್ವಕರ್ಮನೇ, ನೀವೇ ಈ ಜಗತ್ತಿನ ಪರಮಕಾರಣವಾಗಿದ್ದೀರಿ. ನೀವೇ ಪುರುಷೋತ್ತಮರಾಗಿದ್ದೀರಿ. ನಿಮ್ಮ ಮಹಿಮೆ ಅಪಾರವಾದುದು. ನೀವೇ ಜಗತ್ತಿನ ಏಕಮೇವಾದ್ವಿತೀಯ ಆಧಾರವಾಗಿದ್ದೀರಿ. ನೀವೇ ಅದರ ಪರಮ ಗುರಿಯೂ ಆಗಿದ್ದೀರಿ."

ದೇವತೆಗಳ ಸ್ತವನದಿಂದ ಭಗವನ್ ವಿಶ್ವಕರ್ಮನು ಸಂಪ್ರೀತನಾದನು. "ದೇವ ಸ್ತುತಿಯಿಂದ ಸ್ವಸ್ವರೂಪ ಜ್ಞಾನವಾಗುವುದರೊಂದಿಗೆ ದೈವಭಕ್ತಿಯೂ ಲಭಿಸುತ್ತದೆ. ದೇವಶಿರೋಮಣಿಗಳೇ ನಾನು ಪ್ರಸನ್ನನಾದ ನಂತರ ಯಾವುದಾದರೂ ಸರಿಯೇ ದುರ್ಲಭವಾಗುವುದಿಲ್ಲ. ನನ್ನ ಭಕ್ತರಿಗೆ ನನ್ನವಿನಾ ಬೇರೆಯಾದುದೇನೂ ಬೇಕಾಗುವುದು ಇಲ್ಲ. ಜಗತ್ತಿನ ವಿಷಯಗಳನ್ನು ಸತ್ಯವೆಂದು ನಂಬಿ ವರ್ತಿಸುವವರು ಮಾಯಾವರಣ ವಶಿಗಳಾಗಿರುತ್ತಾರೆ. ಈಗ ನಡೆಯುತ್ತಿರುವುದೆಲ್ಲಾ ನಡೆಯಬೇಕಾದುದೇ. ಇಚ್ಛಿತ ವಸ್ತುವನ್ನು ಹಾಗೆಯೇ ಕರುಣಿಸುವವನು ಹೇಗೆ ಮೂರ್ಖನೆನಿಸಿಕೊಳ್ಳುತ್ತಾನೆಯೋ, ಅದೇ ತೆರನಾಗಿ ಮುಕ್ತನಾಗಿರುವವನು ಅಜ್ಞಾನಿಯನ್ನಾದರೂ ಸರಿಯೆ ಕರ್ಮ ಬಂಧನದಿಂದ ಕಟ್ಟಿಹಾಕಲು ಬಯಸುವುದಿಲ್ಲ. **ರೋಗಿ ಬಯಸಿದರೂ ಒಳ್ಳೆಯ ವೈದ್ಯನು ಕುಪಥ್ಯವನ್ನು ಹೇಳುವುದಿಲ್ಲ.** ಅಲ್ಲವೇ?... ದೇವೇಂದ್ರ ನೀನು ನಿಮಿತ್ತ. ನಿನ್ನ ಕರ್ಮಫಲವನ್ನು ಅನುಭವಿಸದೆ ಬೇರೆ ಮಾರ್ಗವಿಲ್ಲ. ಇದು ಸಂಕ್ರಮಣದ ಕಾಲ. ಬದಲಾವಣೆ ಸದಾ ಯಾತನಾಮಯವಾಗಿಯೇ ಇರುತ್ತದೆ. **ಬೇವು ಬಿತ್ತಿ ಮಾವು ಪಡೆದವರುಂಟೇ?** ವೃತ್ರನನ್ನು ಸಂಹರಿಸುವ ಅಧಿಕಾರ ನಿನ್ನದೇ. ತ್ವಷ್ಟ ಬ್ರಹ್ಮನ ಪಾದವನ್ನು ಆಶ್ರಯಿಸಿ, ಸೃಷ್ಟಿಗೆ ಒದಗಿರುವ ವಿಪತ್ತನ್ನು ವಿವರಿಸಿ, ನಿನ್ನ ಕುಕೃತ್ಯಕ್ಕೆ ನೀನೇ ಕ್ಷಮೆಯನ್ನು ಕೋರಬೇಕು. ಈ ತೊಂದರೆಯಿಂದ ಪಾರಾಗುವ ಹಾದಿಯನ್ನು ಆತನೇ ತೋರಿಸುತ್ತಾನೆ. ಲೋಕಕ್ಕೆ ಕಲ್ಯಾಣವಾಗುತ್ತದೆ. ನಿನಗೆ

ಮಾತ್ರ ದೋಷ ತಪ್ಪಿದ್ದಲ್ಲ" ಎಂದು ಹೇಳಿ ಭಗವಾನ್ ವಿಶ್ವಕರ್ಮನು ಅಂತರ್ಧಾನನಾದನು.

ದೇವೇಂದ್ರನಿಗೆ ಈಗ ಜ್ಞಾನೋದಯವಾಗಿತ್ತು. ತ್ವಷ್ಟ ಬ್ರಹ್ಮನು ಸಾಮಾನ್ಯ ದೇವನಲ್ಲ. ತನ್ನಂತಹ ಹಲವು ಇಂದ್ರರನ್ನು ಸೃಷ್ಟಿಸಬಲ್ಲ ಶಕ್ತಿ ಇರುವ ಪ್ರಜಾಪತಿ; ಬ್ರಹ್ಮನಿಗೆ ಸರಿಸಮಾನವನಾಗಿರುವ ದೇವ. ತಾನು ಈಗ ವಿಶ್ವರೂಪಾಚಾರ್ಯನ ಕೊಲೆಗಾರ. ಅದರಿಂದ ಗಳಿಸಿರುವ ಬ್ರಹ್ಮಹತ್ಯೆ ತನಗೆ ಈಗಾಗಲೇ ಅಂಟಿದೆ. ಬ್ರಹ್ಮ ಹತ್ಯೆಯು ಸಾಧಾರಣವಾದ ಪಾಪವಲ್ಲ. ಶಿವನನ್ನು ದಿಗಂಬರನನ್ನಾಗಿ ಮಾಡಿ ಕಾಶಿಯಲ್ಲಿ ಭಿಕ್ಷಾಟನಾ ಮೂರ್ತಿಯನ್ನಾಗಿ ಅಲೆಸಿದಂತಹುದು. ಮೊದಲೇ ತ್ವಷ್ಟ ಬ್ರಹ್ಮನನ್ನು ಆಶ್ರಯಿಸಿದ್ದಿದ್ದರೆ ತಾನು ಇಷ್ಟೊಂದು ಭೀಕರ ಪರಿಣಾಮವನ್ನು ಎದುರಿಸ ಬೇಕಾಗಿರಲಿಲ್ಲ. ಈಗಲೂ ಅದೇ ಮಾಡಬೇಕು. ಅದೂ ಇಷ್ಟೆಲ್ಲಾ ಆದನಂತರ!...

## ತ್ವಷ್ಟ ಬ್ರಹ್ಮನ ಅಭಯ

ತ್ವಷ್ಟ ಬ್ರಹ್ಮನು ತನ್ನ ಆಶ್ರಮದಲ್ಲಿ ಶತಪಥ ಸುತ್ತುತ್ತಿದ್ದ. 'ಕೋಪದ ಫಳಿಗೆ ಅನಾಹುತಗಳಿಗೆ ಕಾರಣವಾಗುತ್ತದೆ' ಎಂದು ತಾನೇ ಹಲವು ಬಾರಿ ಹೇಳಿಕೊಂಡಿದ್ದ. ಈಗ ತನ್ನ ಕೋಪದ ಫಲವಾದ ಅನಾಹುತದ ದೃಶ್ಯಗಳನ್ನು ತಾನೇ ಕಾಣುತ್ತಿದ್ದ. ತನ್ನ ಕೋಪ ಇಂದ್ರನ ವರ್ತನೆಯ ಮೇಲೆ; ಅವನ ಸ್ವಾರ್ಥ ಚಿಂತನೆಯ ವಿರುದ್ಧ; ಅವನ ಅಧರ್ಮ ಪ್ರವೃತ್ತಿಯ ವಿರುದ್ಧ. ಇದಕ್ಕೆ ಇಂದ್ರನಿಗೆ ಶಿಕ್ಷೆಯಾಗಬೇಕಾಗಿತ್ತು. ಕೋಪದ ಆವೇಗದಲ್ಲಿ ಮಂತ್ರದ ಸ್ವರ ತಪ್ಪಿ 'ಇಂದ್ರನನ್ನು ಕೊಲ್ಲುವ ಶತ್ರು' ಎಂಬ ಅರ್ಥವು 'ಇಂದ್ರನಿಂದ ಕೊಲ್ಲಲ್ಪಡುವ ಶತ್ರು' ಎಂದು ಬದಲಾಗಿತ್ತು. ಇದು ಆ ಸೃಷ್ಟಿಕರ್ತನ ನಿಯಾಮಕವೇನೋ? ಇಲ್ಲದಿದ್ದರೆ ಮಂತ್ರಾಧಿಪತಿಯಾಗಿರುವ ತಾನೇ ಹೀಗೆ ಸ್ವರ ತಪ್ಪುವುದು ಸಾಧ್ಯವೇ? ಎಂತಹ ಪ್ರಜಾಪತಿಯಾದರೂ ಸರಿಯೆ ಲೋಕ ಕಂಟಕನಾಗಬಾರದು. ತಾನು ಸೃಷ್ಟಿಸಿರುವ ಮಹಾಶಕ್ತಿಯನ್ನು ತಾನೇ ಉಪಸಂಹರಿಸಬೇಕು. ತಾನೇ ಆ ಮಾರ್ಗವನ್ನು ಹೇಳಬೇಕು..' ಎಂದು ತನ್ನಲ್ಲಿಯೇ ಚಿಂತಿಸುತ್ತಿದ್ದ.

ಅದೇ ಸಮಯಕ್ಕೆ ದೇವೇಂದ್ರ ಬಂದು ತ್ವಷ್ಟಬ್ರಹ್ಮನ ಪಾದಗಳನ್ನು ಹಿಡಿದು "ನನ್ನ ತಪ್ಪನ್ನೆಲ್ಲಾ ಕ್ಷಮಿಸಿ. ಈಗ ಲೋಕಗಳನ್ನೆಲ್ಲಾ ತಾವೇ ಕಾಪಾಡಬೇಕು... ತಾವು ಸೃಷ್ಟಿಸಿರುವ ವೃತ್ರ ಎಲ್ಲಾ ಲೋಕಗಳಲ್ಲಿರುವ ಜಲತತ್ವವನ್ನು ಹೀರಲು ಪ್ರಾರಂಭಿಸಿದ್ದಾನೆ. ಇದರಿಂದ ಸೃಷ್ಟಿಗೇ ಅಪಾಯ ಒದಗಿದೆ.... ತಾವೇ ರಕ್ಷಿಸಬೇಕು" ಎಂದು ಬೇಡಿಕೊಂಡು.

"ಪ್ರಸ್ತುತ ಪರಿಸ್ಥಿತಿಯಿಂದ ಪಾರಾಗಬೇಕಾದುದು ಮುಖ್ಯವೇ. ಆದರೆ ಇಂದ್ರನಾಗಿ ನೀನು ನಡೆಸಿರುವ ಪಾಪಕೃತ್ಯಗಳಿಂದ ನೀನು ಶಿಕ್ಷೆ ಅನುಭವಿಸದೆ ಬೇರೆ ಮಾರ್ಗವಿಲ್ಲ. ಬ್ರಹ್ಮ ಹತ್ಯಾದೋಷವು ಯಾರನ್ನೂ ಕಾಡದೆ ಬಿಡದು. ಈಗಾಗಲೇ ನನ್ನ ಒಬ್ಬ ಮಗನನ್ನು ಕೊಂದು ಆ ಪಾಪವನ್ನು ಸಂಗ್ರಹಿಸಿ ಕೊಂಡಿರುವೆ. ಈಗ ನನ್ನ ಇನ್ನೊಬ್ಬ ಮಗನಾದ ವೃತ್ರನನ್ನು ನೀನೇ ವಧಿಸಬೇಕು. ಅದೂ ಬ್ರಹ್ಮ ಪಿಂಡವೇ. ಆದ್ದರಿಂದ ಇನ್ನೊಂದು ಬ್ರಹ್ಮಹತ್ಯೆಯ ದೋಷವನ್ನೂ ನೀನೇ ಹೊರಬೇಕು. ಇದಕ್ಕೆ ನೀನು ಸಿದ್ಧನಾಗಿರುವೆಯಾ?..." ಎಂದು ಗಂಭೀರ ವಾಣಿಯಲ್ಲಿ ತ್ವಷ್ಟಬ್ರಹ್ಮ ಕೇಳಿದ.

"ತಮ್ಮಾಜ್ಞೆಯನ್ನು ಶಿರಸಾವಹಿಸುತ್ತೇನೆ. ನನಗೆ ಬರುವ ವಿಪತ್ತು, ಸಂಕಟಗಳು ನನ್ನ ವೈಯಕ್ತಿಕವಾದುವು. ನನ್ನ ತಪ್ಪಿಗೆ ಶಿಕ್ಷೆಯನ್ನು ನಾನೇ ಅನುಭವಿಸುತ್ತೇನೆ. ದಯಮಾಡಿ ಈಗಿನ ವಿಪತ್ತಿನಿಂದ ಲೋಕಗಳನ್ನು ಉಳಿಸಿ..." ಎಂದು ಇಂದ್ರನು ತುಂಬಾ ಅನುನಯದಿಂದ ಬೇಡಿದ.

"ವೃತ್ರನಿಂದ ನೀನು ರಕ್ಷಿತನಾಗಲು ದಧ್ಯಙ್ ಆಥರ್ವಣನಲ್ಲಿರುವ ಮಧುವಿದ್ಯೆಯನ್ನು ನೀನು ಪಡೆದುಕೊಳ್ಳಬೇಕು. ಇದರ ತರುವಾಯ ನನ್ನ ವಂಶೀಯನಾದ ತಕ್ಷನಿಂದ ವಜ್ರಾಯುಧವನ್ನು ತಯಾರಿಸಿ ಕೊಂಡು ಅದನ್ನು ವೃತ್ರನ ಮೇಲೆ ಪ್ರಯೋಗಿಸಬೇಕು. ಈ ಎಲ್ಲಾ ಸಂದರ್ಭಗಳಲ್ಲೂ ವೃತ್ರವಧೆಯ ಪಾಪನ್ನು ನೀನೇ ಸ್ವೀಕರಿಸಬೇಕಾಗಿರುತ್ತದೆ" ಎಂದು ತ್ವಷ್ಟಬ್ರಹ್ಮ ಹೇಳಿದನು.

ಇಂದ್ರನ ಸಂತೋಷಕ್ಕೆ ಎಣೆಯೇ ಇರಲಿಲ್ಲ. ಅಲ್ಲಿಂದ ಕೂಡಲೇ ಹೊರಟ.

## ಮಧುವಿದ್ಯೆಯನ್ನು ಪಡೆದುಕೊಂಡ

ದಧ್ಯಙ್ ಆಥರ್ವಣ ಮಹರ್ಷಿಯ ಆಶ್ರಮ. ಮಂದವಾದ ಗಾಳಿ ಬೀಸುತ್ತಿದೆ. ಸೂರ್ಯನ ಬೆಳಗಿನ ಕಾಂತಿಯು ಆಶ್ರಮಕ್ಕೆ ಹಲವು ರಂಗುಗಳನ್ನು ಮೆತ್ತಿ ಅಲಂಕರಿಸಿದೆ. ವಾತಾವರಣವೇ ಆಹ್ಲಾದಕರವಾಗಿದೆ. ಪಕ್ಷಿಗಳ ಕಲರವ ವೀಣಾನಾದದಂತೆ ಇಂಪಾಗಿದೆ. ಹೋಮ ಧೂಮದಿಂದ ಆಶ್ರಮದ ಪರಿಸರವೆಲ್ಲಾ ಸುಗಂಧ ಯುಕ್ತವಾಗಿದೆ. ಫಲಪುಷ್ಪಗಳಿಂದ ಸಂಮೃದ್ಧವಾಗಿರುವ ತರು – ಲತೆಗಳು. ಅತಿಥಿಗಳನ್ನು ಆಹ್ವಾನಿಸುತ್ತಿರುವ ಕೋಗಿಲೆಯ ಕೂಗು. ನಿರ್ಭಯವಾಗಿ ಓಡಾಡುತ್ತಿರುವ ಜಿಂಕೆಗಳ ಹಿಂಡು, ಶಾಶ್ವತವಾಗಿ ವಿರೋಧಿಗಳಾಗಿರುವ ಮೃಗಗಳೂ ಕೂಡ ಸ್ನೇಹದಿಂದ ಅಲ್ಲಿ ಓಡಾಡುತ್ತಿದ್ದವು. ವೇದ ಮಂತ್ರ ಪಠನದಿಂದ ಪರಿಸರವು ಅನುರಣಿಸುತ್ತಿತ್ತು.

ಧರ್ಮದ ಸಾಕಾರ ಮೂರ್ತಿಯಾಗಿ ಶೋಭಾಯಮಾನನಾಗಿದ್ದ ದಧ್ಯಙ್ ಅಥರ್ವಣ ಮಹರ್ಷಿ. ಆತನ ಬದುಕೇ ಲೋಕ ಕಲ್ಯಾಣಾರ್ಥವಾಗಿತ್ತು. ತನ್ನನ್ನು ಆಶ್ರಯಿಸಿ ಬಂದವರಿಗೆ ವಿದ್ಯೆಯನ್ನು 'ಇಲ್ಲ' ಎಂದು ಹೇಳದೆ ದಾನ ಮಾಡುತ್ತಿದ್ದ ಧರ್ಮಿಷ್ಠ. ಮಾನವ ಕಲ್ಯಾಣ, ಜಗತ್ತಿನ ಉದ್ಧಾರ ಆತನ ಬದುಕಿನ ಗುರಿ. ಅನೇಕ ಶಿಷ್ಯರಿಗೆ ವೇದಪಾಠವನ್ನು ಹೇಳುತ್ತಿದ್ದ. ಬ್ರಹ್ಮಜ್ಞಾನಿಯಾದ ಆತನಿಗೆ ಜಗತ್ತೆಲ್ಲಾ ಕನಸಿನಂತೆ ಭಾಸವಾಗುತ್ತಿತ್ತು. ಇಲ್ಲಿಯ ಬದುಕು ತೃಣಪ್ರಾಯವಾಗಿತ್ತು. ಬ್ರಹ್ಮತತ್ತ್ವದ ಸವಿಯಲ್ಲಿ ಯೋಗ ನಿರತರಾಗಿದ್ದವನು. ಕೋಮಲ ಸ್ವಭಾವದ ದಯಾರ್ದ್ರ ಹೃದಯಿಯಾದ ಈತನು ಶಿಷ್ಯ ವತ್ಸಲನಾಗಿದ್ದನು.

ಅಪರಿಚಿತನೊಬ್ಬ ಬಂದ. ಮಹರ್ಷಿಯು 'ತಾವು ಯಾರು? ತಪೋವನಕ್ಕೆ ತಾವು ಬಂದ ಕಾರಣವೇನು?' ಎಂದುಕೇಳಿದ.

"ನಿಮ್ಮಲ್ಲಿಯ ಜ್ಞಾನವನ್ನು ಪಡೆದುಕೊಳ್ಳಲು ಬಂದಿರುವ ಅತಿಥಿ. ತಮ್ಮ ಹಿರಿಮೆಯ ಬಗ್ಗೆ ಕೇಳಿದ್ದೆ. ತಮ್ಮ ದರ್ಶನ ಭಾಗ್ಯದಿಂದ ನಾನು ಪುನೀತನಾಗಿದ್ದೇನೆ. ತಮ್ಮ ಪ್ರಖ್ಯಾತಿಯು ದಿಕ್ ದಿಗಂತಗಳನ್ನು ವ್ಯಾಪಿಸಿದೆ. ಜ್ಞಾನ ವೃದ್ಧರಾಗಿರುವ ತಾವು ನನ್ನ ಬಯಕೆಯನ್ನು ಈಡೇರಿಸುವ ಮಾತನ್ನು ಕೊಟ್ಟರೆ ನಾನು ಇಲ್ಲಿಗೆ ಬಂದ ಕಾರಣವನ್ನು ಹೇಳುತ್ತೇನೆ" ಎಂದು ಹೇಳಿದ ಆ ಅಪರಿಚಿತ.

ಅತಿಥಿ ಸೇವಾ ತತ್ಪರನು, ಬಹು ಧಾರಾಳ ಬುದ್ಧಿಯವನು ಆದ ದಧ್ಯಜ್ ಆಥರ್ವಣನು 'ಆಗಲಿ' ಎಂದು ಹೇಳಿದ. ಮಾತಾ – ಪಿತಾ– ಗುರು– ದೈವ ಗಳೊಂದಿಗೆ ಅತಿಥಿಪೂಜನವೂ ಪ್ರತ್ಯೇಕವಾಗಿ ಉಂಟು. ಅತಿಥಿ ಸತ್ಕಾರದ ನಂತರ ಆತನ ಬಯಕೆಯನ್ನು ಈಡೇರಿಸುವುದು ಎಲ್ಲರ ಧರ್ಮ. ಅದರಲ್ಲು ಮಹರ್ಷಿಯ ಆಶ್ರಮ! ಅತಿಥಿಯ ವಿಷಯದಲ್ಲಿ ಲಿಂಗ– ವಯಸ್ಸು ಇತ್ಯಾದಿ ಅಂತರಗಳಿಲ್ಲ. ಬಂದವರು ಯಾರೇ ಆಗಿರಲಿ,ಅಪರಿಚಿತರಾಗಿರಲಿ, ಕೊನೆಗೆ ತನ್ನ ಶತ್ರುವೇ ಆದರೂ ಅವನನ್ನು ಗೌರವಿಸುವುದು ವೈದಿಕ ಮತದವರ ವಾಡಿಕೆ. ಆದ್ದರಿಂದಲೇ ದಧ್ಯಜ್ ಮಹರ್ಷಿಯು ಆ ರೀತಿ ಮಾತುಕೊಟ್ಟಿದ್ದು.

"ಮಹರ್ಷಿಗಳೇ, ನನಗೆ ತಾವು ವಚನಕೊಟ್ಟಿದ್ದಕ್ಕಾಗಿ ನಾನು ಕೃತಜ್ಞ, ನನ್ನ ಬಗ್ಗೆ ಪೂರ್ಣವಾಗಿ ಈಗ ಹೇಳಿಕೊಳ್ಳುತ್ತೇನೆ. ನಾನು ಸ್ವರ್ಗಾಧಿಪತಿಯಾದ ದೇವೇಂದ್ರ. ಪಾಂಡಿತ್ಯದಲ್ಲಿ ನಿಮಗೆ ನೀವೇ ಸಾಟಿ. ಬ್ರಹ್ಮಜ್ಞಾನದಲ್ಲಿ ತಮ್ಮನ್ನು ಮೀರಿದವರ್‍ಯಾರೂ ಇಲ್ಲ. ನಿಮ್ಮನ್ನು ಆಶ್ರಯಿಸಿದವರಿಗೆ ಶಾಸ್ತ್ರಗಳನ್ನು ಸಂಪೂರ್ಣವಾಗಿ ಉಪದೇಶಿಸುತ್ತಿದ್ದೀರಿ. ಮಾನವರು ನಿಮ್ಮ ಉಪದೇಶದ ಫಲವಾಗಿ ದುಃಖದಿಂದ ತುಂಬಿರುವ ಈ ಪ್ರಪಂಚದಿಂದ ಸುಲಭವಾಗಿ ಮುಕ್ತರಾಗುತ್ತಿದ್ದಾರೆ. ನಾನು ಸ್ವರ್ಗಾಧಿಪತಿ. ನಮಗೆ ಜರಾ– ಮೃತ್ಯುಗಳ ಕಾಟವಿಲ್ಲ. ಸುಖ – ಸಂಪತ್ತುಗಳಿದ್ದರೂ ಬ್ರಹ್ಮತತ್ತ್ವವನ್ನು ಅರಿಯಬೇಕೆಂಬ ಆಸೆ ಯುಂಟಾಗಿದೆ. ಆದ್ದರಿಂದ ನಿಗೂಢವಾದ **ಮಧುವಿದ್ಯೆ**ಯನ್ನು ಪಡೆಯಬೇಕೆಂದು ನಿಮ್ಮನ್ನು ಆಶ್ರಯಿಸಿ ಬಂದಿದ್ದೇನೆ. ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ, ಮಧುವಿದ್ಯೆಯನ್ನು ಉಪದೇಶಿಸಿ. ಹೀಗೆ ನಾನು ನಿಮ್ಮ ಶಿಷ್ಯನಾಗುವುದು ನನ್ನ ಸುಕೃತವೆಂದು ಭಾವಿಸಿದ್ದೇನೆ. ನನ್ನನ್ನು ಅನುಗ್ರಹಿಸಬೇಕೆಂದು ಪ್ರಾರ್ಥನೆ" ಎಂದು ಇಂದ್ರನು ತನ್ನ ನೈಜಕೋರಿಕೆಯನ್ನು ಹೊರಗಿರಿಸಿದ.

ಅತಿಥಿ ಇಂದ್ರನೆಂಬುದು ಗೊತ್ತಾದಾಗ ಮಹರ್ಷಿ ಅವಾಕ್ಕಾದ. ಇಂದ್ರನ ಕಪಟವು ಮೂರು ಲೋಕಗಳಲ್ಲೂ ಪ್ರಖ್ಯಾತವಾದುದೇ! ಇದರಲ್ಲೇನು ಕಪಟ ಅಡಗಿದೆಯೋ ಹೇಳುವವರು ಯಾರು? ತನ್ನ ಚಕ್ರಾಧಿಪತ್ಯವನ್ನು, ಸಿಂಹಾಸನವನ್ನು ಉಳಿಸಿಕೊಳ್ಳಲು ಇಂದ್ರ ಏನನ್ನಾದರೂ ಮಾಡುತ್ತಾನೆ. ಶಿಷ್ಯನ ಪಾತ್ರಾಪಾತ್ರತೆಯನ್ನು ನಿರ್ಣಯಿಸಬೇಕಲ್ಲವೇ? ಆದರೆ ಈಗ ಅದಕ್ಕೆ ಅವಕಾಶವಿರಲಿಲ್ಲ. ಮೊದಲೇ ಮಾತು ಕೊಟ್ಟಾಗಿದೆ. ಅನರ್ಹನಿಗೆ ವಿದ್ಯೆಯ ಉಪದೇಶದಿಂದ ಅನರ್ಥ ಸಂಭವಿಸುತ್ತದೆ. ಮಹಾಪುರುಷರು ಕೊಟ್ಟ ವಚನಕ್ಕೆ ಕಟ್ಟು ಬೀಳುತ್ತಾರೆ. ಮಧುವಿದ್ಯೆಯ ಉಪದೇಶ ಪಡೆಯುವವನಲ್ಲಿ ಇಂದ್ರಿಯ ನಿಗ್ರಹ, ಕಾಮ ಕ್ರೋಧಾದಿಗಳನ್ನು ಜಯಿಸಿರುವ ಮನಸ್ಸು ಇರಬೇಕು. ಯಾರಾದರೂ ಸರಿಯೆ ಕರ್ಮಫಲಗಳಿಂದ ವಂಚಿತರಾಗಲು ಸಾಧ್ಯವಿಲ್ಲ. ಯಾವುದೋ ಒಂದು ದಿನ ಶರೀರ ನಷ್ಟವಾದರೂ ಆತ್ಮ ಉಳಿದೇ ಇರುತ್ತದೆ. ಚಂಚಲವಾದ ಮನಸ್ಸನ್ನು ನಿಯಂತ್ರಣದಲ್ಲಿ ಇರಿಸಿಕೊಂಡಿರುವುದು ಮುಖ್ಯ. ನಂತರದಲ್ಲಿ ಮಾತ್ರವೇ ಪುರುಷಾರ್ಥದ ಗಳಿಕೆ ಸಾಧ್ಯ. ಇಂದ್ರನು ಮಧು ವಿದ್ಯೆಯನ್ನು ಪಡೆಯಲು ಅನರ್ಹನೆಂಬುದು ದಧ್ಯಜ್ ಮಹರ್ಷಿಯ ತೀರ್ಮಾನ. ಆದರೆ ಮಾತು ಕೊಟ್ಟಾಗಿತ್ತಲ್ಲವೇ? ಅದಕ್ಕಾಗಿ ಹೇಳಿದ –

"ಭೋಗ–ಮೋಕ್ಷಗಳು ಪರಸ್ಪರ ವಿರೋಧವಾದುವು. ಸ್ವರ್ಗಸುಖವು ಶಾಶ್ವತವಾದುದಲ್ಲ. ದೇವತೆಗಳಾಗಿರುವವರೂ ಕೂಡ ಬ್ರಹ್ಮ ವಿದ್ಯೆಯನ್ನು ಪಡೆಯದೆ ಸುಖಿಗಳಾಗುವುದು ಸಾಧ್ಯವಿಲ್ಲ. ಬ್ರಹ್ಮ ಸಾಕ್ಷಾತ್ಕಾರದಿಂದ ಉಂಟಾಗುವ ಸುಖವೇ ನಿತ್ಯವಾದುದು. ಮಧುವಿದ್ಯೆಯನ್ನು ಅರಿಯುವುದರಲ್ಲಿ ಮಾನವ – ದೇವರಲ್ಲಿ ಅಂತರವಿಲ್ಲ. ನಿನ್ನ ಭೋಗ ವಿದ್ಯೆಯನ್ನು ನೀನು ಬಿಡಬೇಕು. ಅಧಿಕಾರದಾಹವನ್ನು ಬಿಟ್ಟು ಜಿತೇಂದ್ರಿಯನಾಗು. ನಿನಗೆ ಮಧುವಿದ್ಯೆಯನ್ನು ಉಪದೇಶಿಸುತ್ತಿದ್ದೇನೆ."

ಮಧು ವಿದ್ಯೆಯನ್ನು ಉಪದೇಶಿಸಿದ. ಈ ವಿದ್ಯೆಯು ಪರಂಪರೆಯಿಂದ ಶಿಲ್ಪಬ್ರಾಹ್ಮಣರಲ್ಲಿ ಬಂದಿದೆ. ಇದನ್ನು **ತ್ವಾಷ್ಟ್ರೀ ಮಧು**ವೆಂದೇ ಹೇಳುತ್ತಾರೆ. ತ್ವಷ್ಟೃ ಬ್ರಹ್ಮನಿಂದ ಶಿಲ್ಪಿ ಸಂಪ್ರದಾಯದಲ್ಲಿ ಪರಂಪರಾನುಗತವಾಗಿ ಈ ವಿದ್ಯೆಯು ಬಂದಿದೆ ಎಂಬುದನ್ನು ಸ್ಪಷ್ಟಪಡಿಸಿದ. ಆಥರ್ವಣರೆಲ್ಲರೂ ಶಿಲ್ಪಿಗಳೇ. ಆದ್ದರಿಂದ ಮಧುವಿದ್ಯೆಯು ಅವರಲ್ಲಿ ಪಾರಂಪರಿಕ ವಿದ್ಯೆ.

ಇಂದ್ರನಾಗಲಿ, ಇಂದ್ರ ಪದವಿಯಾಗಲಿ ಸಾಮಾನ್ಯವಾದುದೇ? ಇದರಿಂದ ದಧ್ಯಜ್ ಅಥರ್ವಣ ಮಹರ್ಷಿಯ ಮಾತುಗಳಿಂದ 'ತನ್ನನ್ನು ಸಾಮಾನ್ಯವಾಗಿ ಪರಿಗಣಿಸುತ್ತಿದ್ದಾನಲ್ಲಾ ಈತ!' ಎಂದು ಇಂದ್ರನಿಗೆ ಕೋಪ ಬಂತು. ಅದನ್ನು ತಡೆಯಲು ಪ್ರಯತ್ನಿಸಿದರೂ ಫಲಕಾರಿಯಾಗಲಿಲ್ಲ. ಕೊನೆಗೆ ಹೇಳಿದ : "ಮಹರ್ಷೀ ನೀವು ಈ ವಿದ್ಯೆಯನ್ನು ಇನ್ನು ಮುಂದೆ ಇತರರಿಗೆ ಉಪದೇಶಿಸಿದ್ದೇ ಆದರೆ ನಿಮ್ಮ ತಲೆಯನ್ನು ನಾನೇ ಕಡಿದು ಹಾಕುತ್ತೇನೆ."

ಅನಧಿಕಾರಿಗೆ ವಿದ್ಯೆಯನ್ನು ಉಪದೇಶಿಸಿದರೆ ಇಂತಹ ವಿಪರೀತ ಫಲವೇ ದೊರೆಯುತ್ತದೆ. ಮಹಾಪುರುಷರು ಸುಖ–ದುಃಖಗಳಿಗೆ ಭಯಗೊಳ್ಳುವುದಿಲ್ಲ. ಇಂದ್ರನ ಮಾತಿಗೆ ಮಹರ್ಷಿ ವಿಚಲಿತನಾಗಲಿಲ್ಲ. ಬಿರುಗಾಳಿ ಮರಗಳನ್ನು ಬುಡ ಮೇಲು ಮಾಡಿದರೂ ಪರ್ವತಗಳನ್ನೇನೂ ಮಾಡಲಾರದು. ಶಾಂತ ಚಿತ್ತನಾಗಿದ್ದ ಮಹರ್ಷಿಯನ್ನು ಕಂಡು ಇಂದ್ರನು ಚಕಿತನಾದ. ತಾನು ಬಂದಿದ್ದ ಕೆಲಸವಾಗಿತ್ತು.

ಇದರ ನಂತರ ವಜ್ರಾಯುಧವನ್ನು ತಯಾರಿಸಿಕೊಳ್ಳಬೇಕಾಗಿತ್ತು. ಅದಕ್ಕಾಗಿ ತಕ್ಷನನ್ನು ಆಶ್ರಯಿಸಬೇಕಾಗಿತ್ತು. ತಕ್ಷನು ಶಿಲ್ಪರ್ಷಿ. ಇಂದ್ರನು ಗೌರವದಿಂದ ಅವನನ್ನು ಆಹ್ವಾನಿಸಿ, ತನ್ನ ಉದ್ದೇಶವನ್ನು ವಿವರಿಸಿದ. ತಕ್ಷನು ವಜ್ರಾಯುಧ ಮಾಡುವ ಕಲೆ ತಿಳಿದಿದ್ದವನೇ. ಪರಂಪರಾನುಗತವಾಗಿ ಆತ ಆಯುಧ ಶಿಲ್ಪಿ. ವಜ್ರಾಯುಧವನ್ನು ತಯಾರಿಸಿ ಕೊಟ್ಟ, ಆದರೆ ಅದನ್ನು ವೃತ್ರನ ಮೇಲೆ

ಬಳಸುವಾಗ ಪಠಿಸಬೇಕಾಗಿದ್ದ ಮಂತ್ರ ಇಂದ್ರನಿಗೆ ಗೊತ್ತಿರಲಿಲ್ಲ. ತನ್ನ ಪರವಾಗಿ ಆ ಆಯುಧವನ್ನು ಬಳಸಬೇಕೆಂದು ತಕ್ಷನನ್ನು ಪ್ರಾರ್ಥಿಸಿದ.

ತಕ್ಷನು "ನನಗೆ ಆಯುಧ ಮಾಡುವುದು ಗೊತ್ತು. ಅದರ ಪ್ರಯೋಗ ನನಗೆ ಸೇರಿದ್ದಲ್ಲ" ಎಂದು ಹೇಳಿತಪ್ಪಿಸಿಕೊಳ್ಳಲು ಪ್ರಯತ್ನಿಸಿದ.

"ಆಯುಧದ ಪ್ರಯೋಗ ಜ್ಞಾನವಿಲ್ಲದೆ ಯಾವ ಶಿಲ್ಪಿ ತಾನೇ ಆಯುಧವನ್ನು ತಯಾರಿಸುವುದು ಸಾಧ್ಯವಿದೆ? ಹಾಗೆ ಹೇಳಬೇಡ. ನನ್ನ ಪರವಾಗಿ ಪ್ರಯೋಗಿಸು. ಇದರಿಂದ ಆಯುಧ ಪ್ರಯೋಗದ ಹೊಣೆಗಾರಿಕೆ ನನ್ನದು. ಅದರ ಫಲಾಫಲ ನಾನೇ ಅನುಭವಿಸುತ್ತೇನೆ. ಈ ನೆರವಿಗಾಗಿ ನಿನಗೆ ಯಜ್ಞದಲ್ಲಿ ಹವಿರ್ಭಾಗವನ್ನು ಕೊಡುತ್ತೇನೆ. ನೀನು ನನ್ನ ಆಪ್ತ ವರ್ಗದಲ್ಲಿ ಸೇರಿರುತ್ತೀಯೆ. ಆಪತ್ತಿನಲ್ಲಿ ನೆರವಾಗುವವರೇ ಆಪ್ತರು. ನನಗೆ ಒದಗಿರುವ ವಿಪತ್ತಿನಿಂದ ನನ್ನನ್ನು ಕಾಪಾಡು" ಎಂದು ಇಂದ್ರ ಹಲವು ವಿಧಗಳಲ್ಲಿ ತಕ್ಷನನ್ನು ಪ್ರಾರ್ಥಿಸಿದ.

ಯಜ್ಞಾಯುಧಗಳಂತೆಯೇ ಯುದ್ಧಲ್ಲಿ ಬಳಸುವ ಆಯುಧಗಳ ಶಿಲ್ಪವು ತಕ್ಷನಿಗೆ ಸೇರಿದ್ದು. ತಕ್ಷಶಾಸ್ತ್ರದ ಪ್ರವರ್ತಕನಿಗೆ ಯಜ್ಞ ಕಾಲದಲ್ಲಿ ಹವಿಸ್ಸು ತನಗೆ ದೊರೆಯುತ್ತದೆ ಎಂಬುದು ಆಕರ್ಷಕವಾಗಿ ಕಂಡಿತು. ಇಂದ್ರನ ಕೋರಿಕೆಯನ್ನು ಅಂಗೀಕರಿಸಿದ. ವಜ್ರಾಯುಧವನ್ನು ತಯಾರಿಸಿಕೊಂಡು ಇಂದ್ರನೊಂದಿಗೆ ಹೊರಟ.

## ವೃತ್ರನೊಂದಿಗೆ ಯುದ್ಧ

ವೃತ್ರಾಸುರನು ಬಹು ಭಯಂಕರನಾಗಿದ್ದ. ಅವನು ಮದೋನ್ಮತ್ತ ಆನೆಯಂತೆ ಘೀಳಿಡುತ್ತಿದ್ದ. ಸಿಂಹದಂತೆ ಘರ್ಜಿಸುತ್ತಿದ್ದ. ಅವನ ಚಲನೆಯಿಂದಲೇ ಭಯಗೊಂಡು ಅನೇಕ ದೇವತೆಗಳು ಮೂರ್ಛಿತರಾಗುತ್ತಿದ್ದರು! ಅವನ ಪಾದ ತಾಡನಕ್ಕೆ ಭೂಮಿಯು ಕಂಪಿಸುತ್ತಿತ್ತು. ಅವನು ತ್ರಿಶೂಲವನ್ನು ಎಲ್ಲಾ ದಿಕ್ಕುಗಳಲ್ಲೂ ಪ್ರಯೋಗಿಸುತ್ತಿದ್ದ.

ಇಂದ್ರನನ್ನು ರಣಭೂಮಿಯಲ್ಲಿ ನೋಡುತ್ತಲೇ "ಓಹೋ! ನೀನು ರಣರಂಗಕ್ಕೆ ಬರಲು ಇಷ್ಟು ದಿನ ಬೇಕಾಯಿತೇ?... ನನ್ನ ಅಣ್ಣ ವಿಶ್ವರೂಪಾಚಾರ್ಯರನ್ನು ಕೊಂದ ಹೇಡಿ ನೀನು! ನನ್ನಮುಂದೆ ನಿಲ್ಲಲು ಇಷ್ಟು ಕಾಲ ಬೇಕಾಯಿತೇ?... ಇನ್ನು ನಿನ್ನ ಕತೆ ಮುಗಿಯಿತು. ನಿನ್ನ ಕುಟಿಲ ಹೃದಯವನ್ನು ನನ್ನ ತ್ರಿಶೂಲವು ಇರಿಯುತ್ತದೆ. ಬ್ರಹ್ಮಜ್ಞಾನಿಯೂ, ಸದಾಚಾರ ಸಂಪನ್ನನೂ, ಬ್ರಾಹ್ಮಣ ಶ್ರೇಷ್ಠನೂ ಆಗಿದ್ದ ನನ್ನ ಅಣ್ಣ ವಿಶ್ವರೂಪಾಚಾರ್ಯರನ್ನು ಕೊಂದಿರುವೆ. ನಿನಗೆ ಯಜ್ಞ ದೀಕ್ಷೆಯನ್ನು ಕೊಟ್ಟು, ನಿನಗೆ ಆಚಾರ್ಯನಾಗಿ ನಿಂತು ನಾರಾಯಣ ಕವಚವನ್ನು ಉಪದೇಶಿಸಿ, ನಿನ್ನ ಜಯಕ್ಕೆ ಕಾರಣನಾದ ನನ್ನ ಅಣ್ಣನನ್ನೇ ಕೊಂದೆಯಲ್ಲೋ ದುರುಳ. ಈಗ ನನ್ನ ವಿರುದ್ಧ ನಾರಾಯಣ ಕವಚವನ್ನು ನೀನು ಬಳಸದಂತೆ ತನ್ನ ತಂದೆಯೇ ಅಭಿಮಂತ್ರಿಸಿದ್ದಾರೆ. ಈಗ ನನ್ನ ಪಾಲಿಗೆ ನೀನು ಸಕ್ಕರೆಯ ಗೊಂಬೆಯಂತಿರುವೆ! ನಿರ್ದಯನಾಗಿ ನಿನ್ನ ಗುರುವಿನ ತಲೆಯನ್ನೇ ಕತ್ತರಿಸಿರುವೆಯಲ್ಲಾ!... ನೀನೆಂತಹ ಕಟುಕ? ನಿನಗೆ ದಯೆಯಾಗಲಿ, ಲಜ್ಜೆಯಾಗಲಿ ಇಲ್ಲ! ಈಗಾಗಲೇ ಕೀರ್ತಿ ಮತ್ತು ಲಕ್ಷ್ಮಿಗಳು ನಿನ್ನನ್ನು ಬಿಟ್ಟಿದ್ದಾರೆ. ಅಜ್ಞಾನಿ ದೇವತೆಗಳು ಮಾತ್ರವೇ ನಿನ್ನನ್ನು ಇನ್ನೂ ನಾಯಕನನ್ನಾಗಿ ಇರಿಸಿ ಕೊಂಡಿದ್ದಾರೆ!" ಎಂದು ಹೇಳಿ ಗಹಗಹಿಸಿ ನಕ್ಕ.

"ಎಲೈ ವೃತ್ರನೇ, ನಿನ್ನ ಅಂತ್ಯ ಸಮೀಪಿಸಿದೆ. ನಾನು ವಜ್ರಾಯುಧದೊಂದಿಗೆ ಬಂದಿದ್ದೇನೆ. ಈಗ ಮಧುವಿದ್ಯೆಯು ನನ್ನದು. ಅದನ್ನು ನೀನು ಮೀರಿ ನಿಲ್ಲಲು ಸಾಧ್ಯವಾಗುವುದಿಲ್ಲ. ಇನ್ನು ನಿನ್ನ ಪ್ರತಾಪ ಸಾಗದು" ಎಂದು ಹೇಳಿದ ದೇವೇಂದ್ರ.

"ನೀನು ನನ್ನ ಅಣ್ಣನನ್ನು ಕೊಂದಿರುವ ಶತ್ರು. ನಿನ್ನನ್ನು ಕೊಲ್ಲುವುದು ನನ್ನ ಪರಮ ಗುರಿ. ನೀನು ಈ ಸಂದರ್ಭದಲ್ಲಿ ನನ್ನ ಮೇಲೆ ವಜ್ರಾಯುವನ್ನು ಪ್ರಯೋಗಿಸಿದರೂ ನಿನ್ನ ಪಾಪಗಳ ಮೂಟೆ ವೃದ್ಧಿಯಾಗುತ್ತದೆ ! ಇದರಿಂದ ನನಗೇನೂ ನಷ್ಟವಿಲ್ಲ. ನಾನು ಸತ್ತರೆ ನನ್ನ ಮೈ ಪಶು ಪಕ್ಷಿಗಳಿಗೆ ಅರ್ಪಿತವಾಗುತ್ತದೆ. ನಾನು ಕರ್ಮಬಂಧನದಿಂದ ಮುಕ್ತನಾಗುತ್ತೇನೆ. ಮಹಾಪುರುಷರು ಹೋಗುವ ಸ್ಥಳಕ್ಕೆ ನಾನೂ ಹೋಗುತ್ತೇನೆ. ನಾನು ನಿನ್ನ ಶತ್ರು, ನಿನ್ನ ಗದೆ ಈಗಾಗಲೇ ವ್ಯರ್ಥವಾಗಿದೆ. ನೀನು ಪಾಪಿ. ಆದ್ದರಿಂದ ನಿನ್ನ ವಜ್ರವೂ ವಿಫಲವಾಗುತ್ತದೆ!..." ಎಂದು ಘರ್ಜಿಸಿದ ವೃತ್ರ.

ಆಗ ತಕ್ಷಕ ಕಾಣಿಸಿಕೊಂಡು "ನೀನು ಸಾಯಲೇಬೇಕು ವೃತ್ರ. ಇಂದ್ರನ ಪರವಾಗಿ ವಜ್ರಾಯುಧವನ್ನು ನಾನು ಅಭಿಮಂತ್ರಿಸುತ್ತಿದ್ದೇನೆ. ಲೋಕ ರಕ್ಷಣೆಗಾಗಿ ಈ ಸಾವು ನಡೆಯಲೇಬೇಕು. ಇದು ನಿನ್ನ ತಂದೆ ತ್ವಷ್ಟ್ರ ಬ್ರಹ್ಮನ ಅಣತಿ! ಎಂದ"

"ಅಯ್ಯಾ ತಕ್ಷಕ. ನಿನ್ನ ವಜ್ರ ನನ್ನನ್ನು ಕೊಲ್ಲುವುದಿಲ್ಲ. ನನ್ನ ವಿಷಯ ಭೋಗ ಲಾಲಸೆಯನ್ನು ಕತ್ತರಿಸುತ್ತದೆ. ನಾನು ಅದರಿಂದ ಈ ಕಾಯವನ್ನು ತೊರೆದು ಮುನಿಜನರಿಗೆ ಉಚಿತವಾಗಿರುವ ಸ್ಥಿತಿಯನ್ನು ಪಡೆದುಕೊಳ್ಳುತ್ತೇನೆ. ಸೃಷ್ಟಿಕರ್ತನಾಗಿರುವ ಭಗವಂತನಲ್ಲಿ ಯಾರ ಪ್ರೇಮವು ಅನನ್ಯವಾಗಿರುವುದೋ ಅಂತಹವರು ಯಾವ ಲೋಕ ಸಂಪತ್ತನ್ನು ತಮ್ಮದನ್ನಾಗಿ ಪಡೆದು ಕೊಂಡಿರುವುದಿಲ್ಲ. ಏಕೆಂದರೆ ಅವುಗಳಿಂದ ಪರಮಾನಂದವು ದೊರೆಯುವುದಿಲ್ಲ. ಅದರ ಬದಲಿಗೆ ರಾಗ – ದ್ವೇಷ, ಅಭಿಮಾನ, ಕಲಹ – ದುಃಖ, ಮಾನಸಿಕ ಯಾತನೆಗಳೇ ಹೆಚ್ಚುತ್ತವೆ. ಆದ್ದರಿಂದ ಅವು ನನಗೆ ಬೇಕಾಗಿಲ್ಲ. ಅವನ್ನು ಪಡೆದುಕೊಂಡ ಇಂದ್ರನು, ಅವನೊಂದಿಗೆ ನೀನು ಸಂತೋಷವಾಗಿದ್ದೇವೆ ಎಂಬ ಭ್ರಮೆಯಲ್ಲಿದ್ದೀರಿ" ಎಂದು ಹೇಳಿದ ವೃತ್ರ ಬ್ರಹ್ಮಜ್ಞಾನಿಯಂತೆ.

ಯುದ್ಧವು ಘೋರವಾಗಿತ್ತು. ಅಸಮ ಬಲರ ಕಾಳಗದಂತೆ ಕಾಣಿಸುತ್ತಿತ್ತು. ವೃತ್ರನು ಒಬ್ಬನೇ ಆಗಿದ್ದರೂ ದೇವ ಸೈನ್ಯವು ಅವನಿಗೆ ಸರಿಸಮವಾಗಿರಲಿಲ್ಲ. 'ಇಂದ್ರನೇ ನೀನು ಉಳಿಯಲಾರೆ!' ಎಂದು ಅಬ್ಬರಿಸುತ್ತ ವೃತ್ರ ತನ್ನ ಒಂದು ತೋಳನ್ನು ಮೇಲೆತ್ತಿ ಬಡಿದ ತೀವ್ರತೆಗೆ ಇಂದ್ರ ಮತ್ತು ಅವನ ರಥ ಧ್ವಂಸವಾದವು. ಇಂದ್ರನ ಆಯುಧವು ದೂರ ಹಾರಿ ಹೋಗಿ ಬಿತ್ತು. ನೋಟಕರಿಗೆ ವೃತ್ರನ ಗೆಲುವು ಖಚಿತ ಎನಿಸುತ್ತಿತ್ತು.

ವೃತ್ರನು "ವಜ್ರವನ್ನು ಪ್ರಯೋಗಿಸಿ ನನ್ನನ್ನು ಕೊಲ್ಲು. ಯುದ್ಧದಲ್ಲಿ ಸರ್ವದಾ ಜಯವೇ ದೊರೆಯದು. ಕಾಲವೇ ಜಯ-ಪರಾಜಯದ ನಿರ್ಣಯವನ್ನು ಮಾಡುತ್ತದೆ. ನಾವೆಲ್ಲ ಗೊಂಬೆಗಳು. ಸೂತ್ರಧಾರ ಬೇರಿದ್ದಾನೆ. ಅವನ ನಿರ್ದೇಶಾನುಸಾರ ಕುಣಿಯುವವರು ನಾವು. ನನ್ನನ್ನು ಕೊಂದರೆ ಬ್ರಹ್ಮ ಹತ್ಯಾದೋಷ ನಿನಗೆ ಬರುತ್ತದೆ. ಅದನ್ನು ನೀನು ಸ್ವೀಕರಿಸಿದಾಗ ಮಾತ್ರವೇ ತಕ್ಷಕನ ವಜ್ರಾಯುಧ ಪ್ರಯೋಗವು ಸಫಲವಾಗುತ್ತದೆ. ಭಗವಂತನೇ ಜೀವಿಗಳ ಮುಖಾಂತರ ಜೀವಿಗಳನ್ನು ಸೃಷ್ಟಿಸುತ್ತಾನೆ. ಅದೇ ರೀತಿಯಾಗಿ ಜೀವಿಗಳ ಮುಖಾಂತರ ಜೀವಿಗಳ ಅಂತ್ಯವನ್ನೂ ನಡೆಸುತ್ತಾನೆ. ಇದರ ರಹಸ್ಯವನ್ನು ನೀನು ಈಗ ತಿಳಿದುಕೊಂಡಿರುವೆ. ***ನಾನೇ ವೃತಘ್ನ*** ಎಂದು ಘೋಷಿಸುತ್ತಾ ತಕ್ಷಕನ ಮೂಲಕ ವಜ್ರಾಯುಧವನ್ನು ಪ್ರಯೋಗ ಮಾಡಿಸು...." ಎಂದು ಇಂದ್ರನಿಗೆ ಹೇಳಿಕೊಟ್ಟ !

ಇದನ್ನು ಕಂಡ ದೇವತೆಗಳು ಬೆಪ್ಪಾದರು. ಇದುವರೆವಿಗೂ ಕಂಟಕನೆಂದು ಭಾವಿಸಿದ್ದ ವೃತ್ರ ಈಗ ಮಹಾಜ್ಞಾನಿಯಂತೆ ಮಾತನಾಡುತ್ತಿದ್ದಾನೆ. ತನ್ನ ಹತ್ಯೆಗಾಗಿ ಇಂದ್ರನಿಗೆ ಮಾರ್ಗವನ್ನು ಹೇಳುತ್ತಿದ್ದಾನೆ. ಅವನ ಸತ್ಯ ಮತ್ತು ನಿಷ್ಕಪಟ ಮಾತುಗಳಿಗೆ ಎಲ್ಲರೂ ತಲೆಬಾಗಿಸಿ ವಂದಿಸಿದರು. ಇಂದ್ರನು ವೃತ್ರನ ಮಾತನ್ನೇ ಅನುಸರಿಸಿದ.

ವೃತ್ರನು ನೆಲದ ಮೇಲೆ ಬಿದ್ದಾಗ ಬೃಹತ್ತಾಗಿರುವ ಪರ್ವತವೇ ಬಿತ್ತೇನೊ ಎನ್ನುವಂತೆ ಸದ್ದಾಯಿತು. ಕಾಲನಂತೆ ಕಾಣುತ್ತಿದ್ದ ಅವನ ಕೋರೆಗಳು, ಯಾತನೆಯಿಂದ ವಿಲಪಿಸುತ್ತಿದ್ದ ಅವನ ಕಾಲುಗಳಿಂದ ಪರ್ವತಗಳೇ ತಲೆ ಕೆಳಗಾಗುತ್ತಿದ್ದವು. ಅವನ ನಾಲಿಗೆ ಕಾಳಸರ್ಪದಂತೆ ಸುತ್ತುತ್ತಿತ್ತು. ಇಂದ್ರನ ಐರಾವತವು ಅವನ ನಾಲಿಗೆಗೆ ಸಿಕ್ಕಿ ಬೀಳುತ್ತಿತ್ತು. ಇಂದ್ರ ಬಹು ಪ್ರಯಾಸದಿಂದ ತಪ್ಪಿಸಿಕೊಂಡ.

ವೃತ್ರನ ಸಾವಿನಿಂದ ಎಲ್ಲರೂ ಹರ್ಷಿತರಾದರು. ಅವರಿಗೆ ಈಗ ಚಿಂತೆಯಾಗಲಿ, ಭಯವಾಗಲಿ ಇರಲಿಲ್ಲ. ಅವರೆಲ್ಲರೂ ಹೊರಟು ಹೋದರು. ಇಂದ್ರನಿಗೆ ಮಾತ್ರ ಶಾಂತಿ ಇರಲಿಲ್ಲ. ಈಗಾಗಲೇ ಒಂದು ಬ್ರಹ್ಮಹತ್ಯಾ ದೋಷ ಅವನ ಹಿಂದೆ ಬಿದ್ದಿತ್ತು. ಈಗ ಇನ್ನೊಂದು ಸೇರಿಕೊಂಡಿತು. ಇಂದ್ರ ನೇರವಾಗಿ ಸುರಲೋಕಕ್ಕೆ ಹೋಗುವುದು ಸಾಧ್ಯವಿರಲಿಲ್ಲ. ತನ್ನನ್ನು ಅನುಸರಿಸುತ್ತಿದ್ದ ಬ್ರಹ್ಮ ಹತ್ಯೆಯಿಂದ ತಪ್ಪಿಸಿಕೊಳ್ಳಲು ವೇಗವಾಗಿ ಓಡಿದ. ಎಷ್ಟೇ ವೇಗವಾಗಿ ಓಡಿದರೂ ದೋಷ ಮಾತ್ರ ಅವನ ಬೆನ್ನು ಬಿಡಲೇ ಇಲ್ಲ. ಎಲ್ಲೂ ಇಂದ್ರನಿಗೆ ಆಶ್ರಯ ದೊರೆಯಲಿಲ್ಲ.

### ಇಂದ್ರ ವಿಶ್ವಕರ್ಮ ಯಜ್ಞ ಮಾಡಿದ

ಬೇರೆ ಹಾದಿ ಕಾಣದ ಇಂದ್ರನು ಮಾನಸ ಸರೋವರದ ಕಮಲದ ನಾಳದಲ್ಲಿ ಒಂದು ಸಾವಿರ ವರ್ಷಗಳ ಕಾಲ ಅಡಗಿಕೊಂಡಿದ್ದ. ಈ ಬ್ರಹ್ಮಹತ್ಯಾದೋಷದಿಂದ ಮುಕ್ತನಾಗುವುದು ಹೇಗೆ ಎಂದು ಚಿಂತಿಸುತ್ತಿದ್ದ. ಈ ಈ ಕಾಲದಲ್ಲಿ ಇಂದ್ರನಿಗೆ ಊಟ ಸಿಗುತ್ತಿರಲಿಲ್ಲ. ಏಕೆಂದರೆ ಇಂದ್ರನ ಊಟವು ಅಗ್ನಿಯ ಮುಖಾಂತರವೇ ದೊರೆಯುತ್ತದೆ. ಅಗ್ನಿಯು ನೀರಿನಲ್ಲಿದ್ದ ಆ ನಾಳದಲ್ಲಿ ಪ್ರವೇಶಿಸುವುದು ಸಾಧ್ಯವಿರಲಿಲ್ಲ. ಇಂದ್ರನು ಹೀಗೆ ತಲೆ ಮರೆಸಿಕೊಂಡಿದ್ದಾಗ ನಹುಷ ಚಕ್ರವರ್ತಿಯು ತನ್ನ ವಿದ್ಯೆ, ತಪಸ್ಸು ಮತ್ತು ಯೋಗಬಲಗಳ ಪ್ರಭಾವದಿಂದ ಸ್ವರ್ಗಲೋಕದ ಇಂದ್ರನಾಗಿದ್ದು ಆಳ್ವಿಕೆ ನಡೆಸುತ್ತಿದ್ದ. ಆತನು ಅಹಂಕಾರಿಯಾಗಿ ವರ್ತಿಸಿ ಋಷಿಗಳ ಕೋಪಕ್ಕೆ ಪಾತ್ರನಾಗಿ ಅವರ ಶಾಪದ ಫಲವಾಗಿ ಹಾವಾದ.

ಇಂದ್ರ ತನ್ನ ಪಾಪದ ಫಲ ಸ್ವಲ್ಪ ಅನುಭವಿಸಿದ್ದ. ಭಗವಂತನನ್ನು ಇಂದ್ರನು ಬೇಡಿದ. ಬೃಹಸ್ಪತಿ ಆಚಾರ್ಯರನ್ನೇ ಮತ್ತೆ ವರಣಮಾಡಿ ವಿಶ್ವಕರ್ಮ ಯಜ್ಞವನ್ನು ನಡೆಸುವ ಸಂಕಲ್ಪ ಮಾಡಿಕೊಂಡ. ಇದಕ್ಕೆ ಸನ್ನದ್ಧನಾಗಿ ಕಮಲ ನಾಳದಿಂದ ಹೊರಬಂದ. ಕೂಡಲೇ ಬ್ರಹ್ಮಹತ್ಯಾ ಪಾತಕವು ಸರ್ಪರೂಪದಲ್ಲಿ ಇಂದ್ರನನ್ನು ಸುತ್ತುವರಿಯಿತು.

ಇಂದ್ರನು ಹೀಗೆ ಬಂಧಿತನಾಗಿದ್ದುಕೊಂಡೇ ವಿಶ್ವಕರ್ಮ ಯಜ್ಞವನ್ನು ವಿಶ್ವಕರ್ಮ ಸೂಕ್ತ ಪಠಣ ಮಾಡುತ್ತಾ ಆಚರಿಸಿದನು. ಸೂಕ್ತದ ಒಂದೊಂದು ಮಂತ್ರವನ್ನು ಪಠಿಸಿ ಆಹುತಿಯನ್ನು ಅರ್ಪಿಸಿದಂತೆಲ್ಲಾ ಸರ್ಪರೂಪಿ ಬ್ರಹ್ಮ ಹತ್ಯಾಪಾತಕವು ತನ್ನ ಒಂದೊಂದೇ ಸುತ್ತನ್ನು ಬಿಡುತ್ತಾ ಇಂದ್ರನನ್ನು ಮುಕ್ತನನ್ನಾಗಿ ಮಾಡಿತು.

### ಋಭುಗಳು ತ್ವಷ್ಟುವಿನ ಶಿಷ್ಯರು

ತ್ವಷ್ಟ ಬ್ರಹ್ಮಶಿಲ್ಪ ಮತ್ತು ಬ್ರಾಹ್ಮಕರ್ಮಗಳನ್ನು ಒಂದಾಗಿ ನಿರ್ವಹಿಸುತ್ತಿದ್ದ ಪೂರ್ಣ ಬ್ರಾಹ್ಮಣ್ಯದ ಪ್ರವರ್ತಕ. ಈತನ ಶಿಷ್ಯರಾದ ಋಭುಗಳು ಬಹು ಪ್ರಖ್ಯಾತರು. ಇವರು ಮುವ್ವರು – ಋಭು, ವಿಭ್ವ, ವಾಜ ಎಂಬುದು ಇವರ ಹೆಸರು. ಆದರೆ ಋಭುಗಳು ವಿಭುಗಳು ಅಥವಾ ವಾಜರು ಎಂಬ ಬಹುವಚನದ ಹೆಸರೇ ಈ ಮುವ್ವರಿಗೂ ರೂಢಿಯಲ್ಲಿ ಬಳಸುತ್ತಾರೆ. ಇವರ ತಂದೆ ಸುಧನ್ವ. ಆದ್ದರಿಂದ ಇವರನ್ನು ಸೌಧನ್ವನ ಋಭುಗಳೆಂದು ಕರೆಯುತ್ತಾರೆ. ಇವರು ಮನುಕುಲದವ ರಾದ್ದರಿಂದ ಮನುಷ್ಯರು ಎಂದು ಪ್ರಖ್ಯಾತರು.

ತ್ವಷ್ಟಬ್ರಹ್ಮನ ಬಳಿ ಇವರು ಶಿಲ್ಪ ಮತ್ತು ವೇದವನ್ನು ಅಧ್ಯಯನ ಮಾಡಿದರು. ಶಿಲ್ಪಕರ್ಮದಿಂದ ಲೋಕೋಪಕಾರವನ್ನು ಮಾಡಿ ದೇವತೆಗಳೂ ಬಯಸಿ ಅದಕ್ಕಾಗಿ ತಪಸ್ಸನ್ನು ಮಾಡುವಂತಹ **ಪರಾಸಿದ್ಧಿ ಲೋಕ**ವನ್ನು ಗಳಿಸಿಕೊಂಡರು.*

ವೈದಿಕ ಸಾಹಿತ್ಯದಲ್ಲಿ ತ್ವಷ್ಟಬ್ರಹ್ಮನ ಪ್ರಭಾವ, ಇತಿಹಾಸ ಬಹು ನಿಚ್ಚಳವಾಗಿದೆ.

ಆದರೂ ಇತಿಹಾಸದಲ್ಲಿ ತ್ವಷ್ಟುವಿನ ಬಗ್ಗೆ ಹಲವು ತಪ್ಪು ಕಲ್ಪನೆಗಳಿವೆ. ತ್ವಷ್ಟ ಎಂಬ ಹೆಸರಿನ ದೇವತೆಗಳು ಹಲವರಿದ್ದಾರೆ. ಇವರಲ್ಲಿ ಮೊದಲಿಗ ತ್ವಷ್ಟಬ್ರಹ್ಮ. ಈತನು ಪ್ರಜಾಪತಿ. ಎರಡನೆಯವನಾಗಿ ದ್ವಾದಶ ಆದಿತ್ಯರಲ್ಲಿ ತ್ವಷ್ಟ ಎಂಬ

---

* ಮಹಾಭಾರತ, ವನಪರ್ವ, 291 : 18 – 24

ಆದಿತ್ಯನಿದ್ದಾನೆ. ಏಕಾದಶ ರುದ್ರಲ್ಲಿ ಒಬ್ಬ ರುದ್ರ ತ್ವಷ್ಟ ಎಂಬ ಹೆಸರನ್ನು ಪಡೆದಿದ್ದಾನೆ. ಇಪ್ಪತ್ತೇಳು ನಕ್ಷತ್ರಗಳಲ್ಲಿ ತ್ವಷ್ಟ ಎಂಬ ನಕ್ಷತ್ರಾಧಿಪನು ಇದ್ದಾನೆ. ಅಷ್ಟವಸುಗಳಲ್ಲಿ ತ್ವಷ್ಟ ವಿಶ್ವಕರ್ಮ ಇದ್ದಾನೆ. ಶಾಸ್ತ್ರಗಳಲ್ಲಿ ಇವರೆಲ್ಲರ ರೂಪಕಲ್ಪನೆಗಳು ಪ್ರತ್ಯೇಕ ವಾಗಿವೆ. ತ್ವಷ್ಟವೆಂಬುದು ಶಿಲ್ಪಿ ಪರಂಪರೆಗೆ ಸೇರಿರುವುದರಿಂದ ಹಲವು ಮಂದಿ ಶಿಲ್ಪಿ ಗಳಿಗೂ ಈ ಹೆಸರು ಇದೆ. ಈ ಅಂತರ ವನ್ನು ಕಾಣದ ಹಲವು ವಿದ್ವಾಂಸರು ಇವರನ್ನೆಲ್ಲಾ ಒಬ್ಬರಾಗಿ ಪರಿಗಣಿಸಿ ಉದಂತಗಳನ್ನು ಬೆರೆಸಿ ಕಲಸು ಮೇಲೋಗರ ಮಾಡಿರುವು ದುಂಟು. ಇವರಲ್ಲಿ ಪ್ರತಿಯೊಬ್ಬರೂ ಬೇರೆ ಬೇರೆ ಎಂಬುದನ್ನು ಗ್ರಹಿಸಬೇಕು. ಶಿಲ್ಪಿ ಬ್ರಾಹ್ಮಣರಲ್ಲಿ ತ್ವಾಷ್ಟ್ರೇಯ ಪರಪರೆಯವರು ಅಹಭೂನ ಶಾಖೆಯವರಾಗಿರುತ್ತಾರೆ. ಇವರಲ್ಲಿ ಇಪ್ಪತ್ತೈದು ಗೋತ್ರಗಳು ಪ್ರತ್ಯೇಕ ವಾಗಿವೆ.

ಈ ಆಖ್ಯಾಯಿಕೆಯಲ್ಲಿ ನಾವು ಗಮನಿಸಬೇಕಾದ ಅಂಶಗಳು ಎರಡು. ರಾಕ್ಷಸರ ವಿರುದ್ಧ ಜಯಗಳಿಸಲು ಇಂದ್ರನು ವಿಶ್ವರೂಪಾಚಾರ್ಯರಿಂದ ಪಡೆದು ಕೊಂಡದ್ದು ನಾರಾಯಣ ಕವಚ. ಇದು ಪೋಷಣಾಕ್ರಿಯೆಗೆ ಸಂಬಂಧಿಸಿದ್ದು. ಇದರಿಂದ ರಾಕ್ಷಸರು ಸೋತರು ದೇವತೆಗಳು ಗೆದ್ದರು. ಇದರ ತರುವಾಯ ಸೃಷ್ಟಿಯಾದ ವೃತ್ರನನ್ನು ಕೊಲ್ಲಲು ಇಂದ್ರನಿಗೆ ಬೇಕಾದದ್ದು ಮಧುವಿದ್ಯೆ ಎಂದು ಪ್ರಖ್ಯಾತವಾಗಿರುವ ಬ್ರಹ್ಮವಿದ್ಯೆ ಅಥವಾ ಆತ್ಮವಿದ್ಯೆ. ಇತರ ಯಾವ ಅಸ್ತ್ರವು ಅಲ್ಲ. ಈ ವಿವರದಿಂದ ಇದು ಕೇವಲ ಇಂದ್ರ, ವೃತ್ರರ ಮಧ್ಯೆ ಯುದ್ಧವೆಂದು ನಾವು ಅರ್ಥೈಸುವುದು ಸೂಕ್ತವಾಗುವುದಿಲ್ಲ. ಇಲ್ಲಿಯ ವಿವರಗಳನ್ನು ಸಂಕೇತಗಳಾಗಿ ಭಾವಿಸಿ ಅವುಗಳ ವಿಶೇಷ ಅರ್ಥಗಳನ್ನು ನಾವು ಗ್ರಹಿಸಬೇಕು. ಈ ಆಖ್ಯಾಯಿಕೆಯ ಅಂತರಾರ್ಥವನ್ನು ಗ್ರಹಿಸಿ ನಮ್ಮ ಬದುಕಿಗೆ ಹೆಚ್ಚಿನ ಲಾಭವನ್ನು ಗಳಿಸಿಕೊಳ್ಳುವ ಪ್ರಯತ್ನವನ್ನು ಮಾಡಬೇಕು. ಈ ಸಂಬಂಧದಲ್ಲಿ ಮುಂದಿನ ಲೇಖನವು ಓದುಗರಿಗೆ ಸ್ವಲ್ಪಮಟ್ಟಿನ ಸಹಾಯ ಮಾಡಬಹುದು. ಆದರೆ ಅದು ಕೇವಲ ನಾರಾಯನ ಕವಚಕ್ಕೆ ಮಾತ್ರವೇ ಸೀಮಿತವಾಗಿದೆ. ಅವಕಾಶವಾದರೆ. ಈ ಆಖ್ಯಾಯಿಕೆಯನ್ನೆಲ್ಲಾ ಇನ್ನೊಮ್ಮೆ ಅಧ್ಯಯನಕ್ಕೆ ಒಳಪಡಿಸಬೇಕೆಂಬ ಆಸೆ ಇದೆ.

**ಇದಂ ಮಹಾಖ್ಯಾನ ಮಶೇಷ ಪಾಪ್ಮನಾಂ ಪ್ರಕ್ಷಾಲನಂ ತೀರ್ಥಪದಾನು ಕೀರ್ತನಮ್ ।**
**ಭಕ್ತ್ಯುಚ್ಛ್ರಾಯಂ ಭಕ್ತಜನಾನು ವರ್ಣನಂ ಮಹೇಂದ್ರ ಮೋಕ್ಷಂ ವಿಜಯಂ ಮರುತ್ವತಃ ॥**
**ಪಠೇಯುರಾಖ್ಯಾನಮಿದಂ ಸದಾ ಬುಧಃ ಶೃಣ್ವಂತ್ಯಥೋ ಪರ್ವಣಿ ಪರ್ವಣೀಂದ್ರಿಯಮ್ ।**
**ಧನ್ಯಂ ಯಶಸ್ಯಂ ನಿಖಿಲಘ ಮೋಚನಂ ರಿಪುಂಜಯಂ ಸ್ವಸ್ತ್ಯಯನಂ ತಥಾಽಽಯುಷಮ್ ॥**

– ಶ್ರೀ ಮದ್ಭಾಗವತಂ 6 : 13 : 22–23

---

# 5 ವಿಶ್ವರೂಪಾಚಾರ್ಯರು ಇಂದ್ರನಿಗೆ ಉಪದೇಶಿಸಿದ ನಾರಾಯಣ ಕವಚ

ಇದು ಭಾಗವತದಲ್ಲಿ ೬ ಸ್ಕಂದ, ೮ ಅಧ್ಯಾಯದಲ್ಲಿ ಹೇಳಿರುವ ಒಂದು ಉಪಾಖ್ಯಾನ.

ಇಂದ್ರತ್ವವು ಒಂದು ಪದವಿ. ಆದ್ದರಿಂದ ಪ್ರತಿ ಮನ್ವಂತರದೊಂದಿಗೆ ಇಂದ್ರನು ಬದಲಾಗುತ್ತಾ ಇರುತ್ತಾನೆ. ಇಂದ್ರ ಪದವಿಯಲ್ಲಿದ್ದು ನಿವೃತ್ತರಾಗಿರುವವರು ಹಲವರುಂಟು. ಈ ಪದವಿಯನ್ನು ಸೃಷ್ಟಿಸಿ ಮೊದಲ ಬಾರಿಗೆ ಅಧಿಷ್ಠಿಸಿದಾತನು ***ಸುಯಜ್ಞ*** ಎಂಬ ಹೆಸರಿನ ವಿಷ್ಣುವು. ಈತನ ನಂತರ ಹಲವರು ಇಂದ್ರ ಪದವಿಯನ್ನು ಅಲಂಕರಿಸಿದ್ದಾರೆ. ಆದ್ದರಿಂದ ತನ್ನ ಸಕಲ ಸಂಪತ್ತನ್ನು ಸಾಗರದಲ್ಲಿ ಕಳೆದುಕೊಂಡ ಇಂದ್ರನು ಯಾರು? ಅಹಲ್ಯಾ ಜಾರನು ಯಾರು? ಎಂಬುದನ್ನು ಪ್ರತ್ಯೇಕವಾಗಿ ಗುರ್ತಿಸುವುದು ಸಾಧ್ಯವಾಗುವುದಿಲ್ಲ. ಈ ಉದಂತ ನಡೆಯುವ ಕಾಲಕ್ಕೆ ಇದ್ದ ಇಂದ್ರನ ಹೆಸರು ***ಪುರಂದರ*** ಎಂದು. ಆಗಿದ್ದ ಬ್ರಹ್ಮನ ಹೆಸರು ***ಆದಿಜ***. ಈ ವಿಷಯವು ಆ ಇಂದ್ರನ ಬಗ್ಗೆ ವಿವರಗಳನ್ನು ಕೊಡುತ್ತದೆ.

ಒಂದು ದಿನ ಇಂದ್ರನು ತನ್ನ ಒಡ್ಡೋಲಗದಲ್ಲಿ ಬಹು ವೈಭವದಿಂದ ಮಂಡಿಸಿದ್ದಾಗ ಆತನ ಗುರುವಾಗಿದ್ದ ಬೃಹಸ್ಪತಿಯು ಓಲಗವನ್ನು ಪ್ರವೇಶಿಸಿದ. ಆಗ ಇಂದ್ರನು ತನ್ನ ಗುರುವನ್ನು ನೋಡಿ ಎದ್ದು ನಿಲ್ಲಲಿಲ್ಲ. ಗುರುವಿಗೆ ಗೌರವವನ್ನು ತೋರಲಿಲ್ಲ. ಬೃಹಸ್ಪತಿಯ ನೆರವಿನಿಂದಲೇ ಇಂದ್ರತ್ವವನ್ನು ಗಳಿಸಿದ್ದ ಪುರಂದರನ ಈ ಕೃತ್ಯದಿಂದ ಖತಿಗೊಂಡ ದೇವ ಗುರು ಬೃಹಸ್ಪತಿಯು ಏನೊಂದೂ ಮಾತನಾಡದೆ ಮೌನವಾಗಿ ಹಿಂತಿರುಗಿ ಹೊರಟುಹೋದ.

ದೇವಗುರು ಬೃಹಸ್ಪತಿಯು ಅಂಗೀರಸ ಸಂತತಿಯವರು. ಬಹು ಪ್ರಜ್ಞಾವಂತರೂ, ಗಂಭೀರ ಕರ್ಮಠರೂ ಆಗಿರುವ ಅಂಗೀರಸರು ಅಗ್ನಿ ಜನ್ಮನರು ಎಂಬುದು ಋಗ್ವೇದದ ವಿವರಣೆ[೧]. ಪ್ರಾಚೀನರಾದ ಇವರಿಗೆ ವಾಣಿಯ ಜ್ಞಾನ ಮೊದಲು, ತರುವಾಯ ಛಂದೋಜ್ಞಾನ ಉಂಟಾಯಿತು[೨]. ಮೂಲತಃ ದೇವ-ಮಾನವರ ಮಧ್ಯೆ ಇದ್ದ ಉಚ್ಚತರ ವ್ಯಕ್ತಿಗಳ ಜಾತಿ ವಿಶೇಷವೆಂದು ಮ್ಯಕ್ಡೋನೆಲ್ ಪಂಡಿತರು[೩] ಹೇಳಿದ್ದಾರೆ. ಬೆಳಕನ್ನು ಕಂಡುಕೊಂಡು, ಸೂರ್ಯನ ಕಾಂತಿಗೆ ಕಾರಣವಾಗಿ, ಸತ್ಯಲೋಕವನ್ನು ಮೆಟ್ಟಿದ ಅಂಗೀರಸರು ಮನುಕುಲದ ಪ್ರವರ್ತಕರೆಂದು ಹೇಳಲು **ಪಿತರೋ ಮನುಷ್ಯಾಃ** ಎಂದು ವರ್ಣಿಸಲಾಗಿದೆ. ಹತ್ತನೆಯ ಮಂಡಲದ ಕೆಲವು ಸೂಕ್ತಗಳಲ್ಲಿ ಇವರನ್ನು ಪಿತೃಗಳೊಂದಿಗೆ ಉಲ್ಲೇಖಿಸಲಾಗಿದೆ. ಇವರು ದೇವತೆಗಳೊಂದಿಗೆ ಕುಳಿತು ಹವಿಸ್ಸನ್ನು ಹಂಚಿಕೊಳ್ಳುತ್ತಿದ್ದರು ಎಂದೂ ಹೇಳಲಾಗಿದೆ ಎಂದು ಮಹರ್ಷಿ ಅರವಿಂದರು ಹೇಳಿದ್ದಾರೆ[೪]. ಭೃಗ್ವಾಂಗೀರಸ ವಂಶಸ್ಥರಾದ ಬ್ರಾಹ್ಮಣರು ಎಂದರೆ ಶಿಲ್ಪಿ ಬ್ರಾಹ್ಮಣರು **ಭೃಗೂಣಾಂ ತ್ವಾಂಗಿರಸಾಂ ವ್ರತಪತೇ ವ್ರತೇನಾಧಾಮಿ** ಎಂಬ ಮಂತ್ರದಿಂದಲೂ ಇತರ ಬ್ರಾಹ್ಮಣರು **ಆದಿತ್ಯಾನಾಂ ತ್ವ ದೇವಾನಾಂ ವ್ರತಪತೇ ವ್ರತೇನಾಧಾಮಿ** ಎಂಬ ಮಂತ್ರದಿಂದಲೂ ಆಧಾನ ಕರ್ಮವನ್ನು ನೆರವೇರಿಸಬೇಕೆಂದು ತೈತ್ತಿರೀಯ ಬ್ರಾಹ್ಮಣವು[೫] ಹೇಳುತ್ತದೆ. ಇದರಲ್ಲಿ ಆಂಗಿರಸೀ ಪ್ರಜೆಗಳ ಉಲ್ಲೇಖವೂ ದೊರೆಯುತ್ತದೆ[೬]. ಇದರಿಂದ ಅಂಗೀರಸರು ಮೊದಲು ಮನುಷ್ಯರಾಗಿದ್ದು ಯಜ್ಞ ಮತ್ತು ಶಿಲ್ಪ ಕರ್ಮದ ಮೂಲಕ ಅಮರತ್ವವನ್ನುಗಳಿಸಿ ದೈವತ್ವವನ್ನು ಸಾಧಿಸಿದರು ಎಂಬುದು ತಿಳಿಯುತ್ತದೆ[೭]. ಕೌಶಿಕ ಸೂತ್ರದ ಮುಖ್ಯ ಆಚಾರ್ಯರಲ್ಲಿ ಇವರ ಉಲ್ಲೇಖವು ದೊರೆಯುತ್ತದೆ.

ಅಂಗೀರಸರಿಗೆ ಎಂಟು ಮಂದಿ ಪುತ್ರರು-ಬೃಹಸ್ಪತಿ, ಉತಥ್ಯ, ಪಯಸ್ಯ, ಶಾಂತಿ, ಘೋರ, ವಿರೂಪ, ಸಂವರ್ತ ಮತ್ತು ಸುಧನ್ವ[೮]. ಅಂಗೀರಸರು ಶಿಲ್ಪಿ ಬ್ರಾಹ್ಮಣರ

---

೧. ವಿರೂಪಾಸ ಇದೃಷ್ಯಸ್ತ ಇದ್ಗಂಭೀರ ವೇಪಸ : ।
ತೇ ಅಂಗೀರಸ ಃ ಸೂನವಸ್ತೇ ಅಗ್ನೇ ಃ ಪರಿಜಜ್ಞಿರೇ ॥ - ಋಗ್ವೇದ ಮಂಡಲ ೮:೨:೨೧

---

೨. ಋಗ್ವೇದ, ೪:೨:೧೬

೩. *A.A. Macdonell : Vedic Mythology p. 273*

೪. *Sri Aurobindo : The Secret of Veda, p. 152*

೫. ತೈತ್ತಿರೀಯ ಬ್ರಾಹ್ಮಣ, ೧:೧:೪

೬. ಆಂಗಿರಸೀಃ ಪ್ರಜಾ ಹವ್ಯಂ ವಹಂತಿ । - ತೈತ್ತಿರೀಯ ಬ್ರಾಹ್ಮಣ, ೨:೨:೩

೭. ಇಮಾಂ ಧಿಯಂ ಸಪ್ತಶೀರ್ಷ್ಣೀಂ ಪಿತಾನ ಋತ ಪ್ರಜಾತಾಂ ಬೃಹತೀಮವಿಂದತ್ ।
ತೂರೀಯಂ ಸ್ವಿಜ್ಜನಯ ದ್ವಿಶ್ವಜನ್ಯೋಽಯಾಸ್ಯ ಉಕ್ಥಮಿಂದ್ರಾಯ ಶಂಸನ್ ॥
-ಋಗ್ವೇದ, ಮಂ ೧೦:೬೭:೧
(ಯಜ್ಞ - ಶಿಲ್ಪ ಕರ್ಮಗಳ ಧಾರಣ ಕರ್ತರೂ, ಏಳು ಪ್ರಮುಖ ದೇವರನ್ನು, ಏಳು ಛಂದಗಳನ್ನು ಪಡೆದಿರುವವರೂ, ಇವರಿಂದ ಯಜ್ಞವನ್ನು ನೆರವೇರಿಸಲೆಂದೇ ಉತ್ಪನ್ನವಾಗಿರುವ ಈ ನನ್ನ ಮಹಾ ಶರೀರವು ನಮ್ಮ ಪಿತೃಗಳಾದ ಅಂಗೀರ ಋಷಿಯಿಂದ ಪ್ರಾಪ್ತವಾಗಿದೆ. ಆ ಋಷಿಗಳು ತುರೀಯ ಪರಮ ಪದವಿಯನ್ನು ಪಡೆದರು ಮತ್ತು ಪೌತ್ರರನ್ನೂ ಪಡೆದುಕೊಂಡರು. ಸಕಲ ಜಗತ್ತುಗಳಿಗೂ ಹಿತವನ್ನೇ ಬಯಸುವ ಪರಮೇಶ್ವರನಾದ ಬೃಹಸ್ಪತಿಯು ಅಂಗಿರಸನನ್ನು ಆತನ ಪೌತ್ರನಾದ ಆಯಾಸ್ಯ ಅಂಗೀರಸನನ್ನು ಸ್ತೋತ್ರಗಳಿಂದ ಸ್ತುತಿಸಿದನು.)

೮. *(i)* ಮಹಾಭಾರತ ಅನುಶಾಸನ ಪರ್ವ, ೮೫ : ೩೦-೩೧
*(ii)* ಬೃಹದ್ದೇವತಾ (೫:೧೦೨) ಯೋಽಂಗಾರೇಭ್ಯ ಋಷಿರ್ಜಜ್ಞೇ ತಸ್ಯಪುತ್ರೋ ಬೃಹಸ್ಪತಿಃ । ಎಂದು ಹೇಳಿ ಅಂಗೀರಸ ವಂಶದ ಋಷಿಯ ಮಗ ಬೃಹಸ್ಪತಿ ಎಂದು ಹೇಳಿದರೆ, ಋಗ್ವೇದದಲ್ಲಿ (೪:೧೨:೧೭) ಈತನನ್ನು ತ್ವಷ್ಟ ಪ್ರಜಾಪತಿಯು ಸೃಷ್ಟಿಸಿದ ಎಂದು ಹೇಳಲಾಗಿದೆ-
ವಿಶ್ವೇಭ್ಯೋ ಹಿ ತ್ವಾ ಭುವನೇಭ್ಯಸ್ಪರಿ ತ್ವಷ್ಟಾಜನತ್ ಸಾಮ್ನಃ ಸಾಮ್ನಃ ಕವಿಃ ।
ಸ ಋಣಚಿದ್ಯಯಾ ಬ್ರಹ್ಮಣಸ್ಪತಿಂದ್ರುಹೋ ಹಂತಾ ಮಹ ಋತಸ್ಯ ಧರ್ತರಿ ॥
ತ್ವಷ್ಟ ಪ್ರಜಾಪತಿಯಿಂದ ದೇವತೆಗಳೆಲ್ಲಾ ಸರ್ವಶ್ರೇಷ್ಠನಾಗಿರುವಂತೆ ಸೃಷಿಸಲ್ಪಟ್ಟಿರುವ ಬೃಹಸ್ಪತಿಯು ಜ್ಞಾನಕ್ಕೆ ಅಧಿಪತಿಯಾಗಿದ್ದು ಸಕಲ ಋಚೆಗಳನ್ನು, ಜ್ಞಾನಗಳನ್ನು ಪಡೆದಿದ್ದಾನೆ. ಈ ಬೃಹಸ್ಪತಿಯು ದೇವ ಯಜ್ಞಗಳನ್ನು ಆಚರಿಸುವವರನ್ನು ಋಣಮುಕ್ತರನ್ನಾಗಿ ಮಾಡಿ ಅವರನ್ನು ಸಂಪನ್ನರನ್ನಾಗಿ ಮಾಡುತ್ತಾನೆ.

ಗೋತ್ರ ಪ್ರವರ್ತಕರು[೯]. ಶಿಲ್ಪಿಬ್ರಾಹ್ಮಣರನ್ನು ಭೃಗ್ವಾಂಗೀರಸ ದ್ವಿಜಕುಲದವರೆಂದು ಸಂಬೋಧಿಸಿ ರುವುದರ ಪ್ರಾಚೀನ ಉಲ್ಲೇಖಗಳು ದೊರೆಯುತ್ತವೆ.

ಒಮ್ಮೆ ದೇವತೆಗಳು ವಾಜಪೇಯ ಯಜ್ಞವನ್ನು ಆಚರಿಸಬೇಕೆಂದು ಸಂಕಲ್ಪ ಮಾಡಿದರು. ಅದನ್ನು ಯಾರು ಆಚರಿಸಬೇಕೆಂಬುದು ಸಮಸ್ಯೆಯಾಗಿ ನಿಂತಿತು. ಯಾರನ್ನೂ ಅವರು ಹಿರಿಯರೆಂದು ಅಂಗೀಕರಿಸದೆ ಯಜ್ಞಾಶ್ವವನ್ನು ಯಾರು ವೇಗವಾಗಿ ಓಡಿಸಿದರೆ ಅವರು ವಾಜಪೇಯವನ್ನು ಮಾಡಬೇಕೆಂದು ತೀರ್ಮಾನಿಸಿಕೊಂಡರು. ಆಗ ಬೃಹಸ್ಪತಿಯು ಯಜ್ಞಕ್ಕಾಗಿ ಆಯ್ಕೆಯಾಗಿದ್ದ ಅಶ್ವಕ್ಕೆ ಸೂಕ್ತವಾಗಿರುವ ರಥವನ್ನು ತಾನೇ ನಿರ್ಮಾಣ ಮಾಡಿ ಅದರ ಮೇಲೆ ತನ್ನ ಧ್ವಜವನ್ನು ಹಾರಿಸಿ, ರಥದಲ್ಲಿ ಶಸ್ತ್ರಾಸ್ತ್ರಗಳನ್ನು ಇರಿಸಿಕೊಂಡು, ರಥಕ್ಕೆ ಅಶ್ವವನ್ನು ಹೂಡಿ ಪಂದ್ಯದಲ್ಲಿ ಎಲ್ಲರಿಗಿಂತಲೂ ವೇಗವಾಗಿ ಕುದುರೆಯನ್ನು ಓಡಿಸಿ ಗೆದ್ದ. ಇದರಿಂದ ಬೃಹಸ್ಪತಿಯು ***ವಾಜಪೇಯ ಯಜ್ಞ***ವನ್ನು ಮೊದಲು ಆಚರಿಸುವ ಅವಕಾಶವನ್ನು ಪಡೆದುಕೊಂಡ. ಆದ್ದರಿಂದಲೇ ವಾಜಪೇಯ ಯಜ್ಞವನ್ನು ***ಗೀಷ್ಪತೀಷ್ಟಿ*** ಅಥವಾ ***ಬೃಹಸ್ಪತಿ ಸವನ***ವೆಂದೂ ಕರೆಯುತ್ತಾರೆ. ಹೀಗೆ ಬೃಹಸ್ಪತಿಯು ಗೆಲ್ಲಲು ಕಾರಣವು ಆತನು ಅಂಗೀರಸ ವಂಶಕ್ಕೆ ಸೇರಿದ್ದುದೇ. ಅಂಗೀರಸರು ಶಿಲ್ಪಿಗಳು; ರಥಕಾರರು. ಬೃಹಸ್ಪತಿಯು ರಥ ನಿರ್ಮಾಣ ರಹಸ್ಯವನ್ನು ಬಲ್ಲವನು. ಆದ್ದರಿಂದಲೇ ಶಿಲ್ಪಿಯಾಗಿರುವವನು ಸ್ಥಪತಿಯಾಗಲು ಗೀಷ್ಪತೀಷ್ಟಿಯನ್ನು (**ಸಗೀಷ್ಪತೀಷ್ಟ್ಯಾ ಸ್ಥಪತಿಃ**) ಮಾಡಬೇಕೆಂದು ಹೇಳಲಾಗಿದೆ[೧೦]. ಶಿಲ್ಪಕರ್ಮದಲ್ಲಿ ಬಳಸಲಾಗುವ ಅಗ್ನಿ ಕುಂಡಗಳಲ್ಲಿ **ಪಾವಕಾ ನ ಃ ಸರಸ್ವತೀ ವಾಜೋಭಿರ್ವಾಜಿನೀವತೀ । ಯಜ್ಞಂ ವಷ್ಟು ಧಿಯಾವಸುಃ ॥**[೧೧] ಎಂಬ ಮಂತ್ರದಿಂದ ಸರಸ್ವತಿಯನ್ನು ಆವಾಹನೆ ಮಾಡುತ್ತಾರೆ. ಹೃದಯಾಗ್ನಿಯನ್ನು ಪ್ರಜ್ವಲಿಸಿ, ವಾಯುವನ್ನು ಪ್ರೇರೇಪಿಸಿ ಅದರಿಂದ ವಾಗ್ರೂಪದಲ್ಲಿ ಜಿಹ್ವಾಗ್ರದಿಂದ ಹೊರ ಬೀಳುವ ವಾಕ್ಕಿನ ಉಗಮವನ್ನು ಅರಿತರೆ ಅಗ್ನಿ ಮತ್ತು ಸರಸ್ವತಿ (ವಾಗ್ದೇವತೆ)ಗಳ ಮಧ್ಯೆ ಇರುವ ನಿತ್ಯ ಕಾರ್ಯ-ಕಾರಣ ಸಂಬಂಧವನ್ನು ಗ್ರಹಿಸಲು ಸಾಧ್ಯವಾಗುತ್ತದೆ. ಆದ್ದರಿಂದಲೇ *ಸ್ವರ್ಣಾದಿ ಶಿಲ್ಪಕರ್ಮಗಳಿಗೆ ಬಳಸಲ್ಪಡುವ ಅಗ್ನಿಕುಂಡಗಳನ್ನು ವಾಗೀಶ್ವರೀ ಅಗ್ನಿಕುಂಡ ಎಂದು ಕರೆಯುತ್ತಾರೆ.*

ಅಂಗೀರಸನಾದ ಬೃಹಸ್ಪತಿಯು ಸ್ವಯಂ ರಥಕಾರ ಶಿಲ್ಪಿ. ಆದ್ದರಿಂದಲೇ ಬೃಹಸ್ಪತಿ ಸವನವನ್ನು ಮಾಡುವವನು ಸ್ಥಪತಿಯಾಗುತ್ತಾನೆ ಎಂದು ಹೇಳಲಾಗಿದೆ. ಸ್ಥಾಪತ್ಯವೆಂದರೆ ವಿಶ್ವಕರ್ಮ ಶಿಲ್ಪಶಾಸ್ತ್ರ[೧೨]. ಯಾರ ನಿರ್ಮಾಣ ಕೌಶಲ್ಯವು ವಿಶ್ವಕರ್ಮ ಪರಬ್ರಹ್ಮನ ಸೃಷ್ಟಿಯಂತೆ ಶ್ರೇಷ್ಠವಾದುದೋ ಅವರನ್ನು ಸಂಕೃತಿ ಎನ್ನುತ್ತಾರೆ. ಈ ರೀತಿಯ ಪ್ರಥಮ ಸಂಕೃತಿಗಳು ವಿಶ್ವಕರ್ಮ, ಮಿತ್ರ, ವರುಣ, ಅಗ್ನಿ ಮತ್ತು ಬೃಹಸ್ಪತಿ[೧೩]. ಇದರಿಂದ ಬೃಹಸ್ಪತಿಯು ಶಿಲ್ಪಿ ಬ್ರಾಹ್ಮಣ. ಆದ್ದರಿಂದಲೇ ಶಿಲ್ಪಿಯು ಸ್ಥಪತಿಯಾಗಲು ಬೃಹಸ್ಪತಿ ಸವನ ಅಥವಾ ವಾಜಪೇಯ ಯಜ್ಞವನ್ನು ಮಾಡಬೇಕು.

ಹೀಗೆ ಬೃಹಸ್ಪತಿಯು ಮೊದಲಿಗೆ ಮಾಡಿದ್ದರಿಂದ **ವಾಜಪೇಯ ಯಜ್ಞ**ವನ್ನು **ಬೃಹಸ್ಪತಿ** ಸವನವೆಂದೂ, ಯಜ್ಞದಲ್ಲಿ ಹವಿಸ್ಸಾಗಿ ಸೋಮರಸವನ್ನು ಬಳಸಿದ್ದರಿಂದ ಇದನ್ನೇ **ಸೋಮಯಾಗ** ವೆಂದೂ ಕರೆಯುತ್ತಾರೆ. ಯಾರು ಈ ಸೋಮಯಾಗವನ್ನು ಮಾಡಿ ಆ ಹವಿಸ್ಸಿನ ಉಳಿಕೆಯನ್ನು (ಯಜ್ಞ ಶೇಷವನ್ನು) ಸೇವಿಸುತ್ತಾರೆಯೋ ಅವರು ವಾಜಪೇಯಿ ಎಂಬ ಹೆಸರನ್ನು ಪಡೆಯುವುದರೊಂದಿಗೆ ಬಹು ಧೈರ್ಯವಂತ, ಮಹಾ ಬಲಶಾಲಿ ಮತ್ತು ಶೀಘ್ರಗಾಮಿಯಾಗುತ್ತಾನೆ.

ಈ ರಹಸ್ಯವನ್ನು ಅರಿತ ಇಂದ್ರನು ತಾನು ದೇವತೆಗಳಲ್ಲಿ ಜ್ಯೇಷ್ಠತ್ವವನ್ನು, ಶ್ರೇಷ್ಠತ್ವವನ್ನು ಪಡೆಯಬೇಕೆಂಬ ಆಸೆಯಿಂದ ಬೃಹಸ್ಪತಿಯನ್ನು ಆಶ್ರಯಿಸಿದ. ಆತ ವಾಜಪೇಯ ಯಜ್ಞವನ್ನು ನೆರವೇರಿಸಲು ಸೂಕ್ತವಾದ ರಥವನ್ನು, ಅದಕ್ಕೆ ತಕ್ಕ ಅಶ್ವಗಳನ್ನು ಮಾಡಿಸಿಕೊಂಡು ಬರುವಂತೆ ಹೇಳಿ ಇಂದ್ರನನ್ನು ಋಭುಗಳ ಬಳಿಗೆ ಕಳುಹಿಸಿದನು.

ಋಭುಗಳು ಸುಧನ್ವನ ಮಕ್ಕಳು. ಸುಧನ್ವನು ಬೃಹಸ್ಪತಿಯ ತಮ್ಮ. ಬೃಹಸ್ಪತಿಯು ಹಿರಿಯ. ಸುಧನ್ವನು ಏಳನೆಯ ಹಾಗೂ ಕೊನೆಯ ತಮ್ಮ. ಸುಧನ್ವನಿಗೆ ಮುವ್ವರು ಮಕ್ಕಳು-ಋಭು, ವಿಭ್ವ ಮತ್ತು ವಾಜ. ತಮ್ಮಂದಿರು ಅಣ್ಣನಿಗೆ ವಿಧೇಯರಾಗಿ ಆತನ ಆಜ್ಞೆಯಂತೆ ನಡೆಯುತ್ತಿದ್ದರು. ಆದ್ದರಿಂದ ಇವರಲ್ಲಿ ಅಂತರಗಳಾಗಲಿ, ಭಿನ್ನತೆಗಳಾಗಲಿ ಇರಲಿಲ್ಲ. ಈ ಸೋದರರನ್ನು ಋಭುಗಳು, ವಿಭುಗಳು ಅಥವಾ ವಾಜರು ಎಂದು ಬಹುವಚನದಲ್ಲಿ ಕರೆಯುವುದು ಎಲ್ಲರಿಗೂ ಅಭ್ಯಾಸವಾಗಿತ್ತು.

ಇಂದ್ರನು ಬಂದು ತಾನು ವಾಜಪೇಯವನ್ನು ಆಚರಿಸಲು ಸೂಕ್ತವಾದ ರಥವನ್ನು ಕುದುರೆಗಳೊಂದಿಗೆ ತಯಾರಿಸಿ ಕೊಡಬೇಕೆಂದು ಅವರು ಪ್ರಾರ್ಥಿಸಿದನು. ಋಭುಗಳನ್ನು ದೃಢವಾದ ಚಕ್ರಗಳನ್ನು ಪಡೆದಿರುವಂತಹ ಒಂದು ಚಿನ್ನದ ರಥವನ್ನು, ಅದಕ್ಕೆ ತಕ್ಕ ಹರಿ ಎಂಬ ಜಾತಿಯ ಕುದುರೆಗಳನ್ನು ಸೃಷ್ಟಿಸಿಕೊಟ್ಟರು. ಸೂರ್ಯನ ಕುದುರೆಗಳೂ ಕೂಡ ಇದೇ ಜಾತಿಗೇ ಸೇರಿದ್ದವು. ಆ ಕುದುರೆಗಳು ತುಟಿಗಳಿಂದಲೇ ಹೇಷಾರವವನ್ನು ಮಾಡುತ್ತಾ, ಉಚ್ಛ್ವಾಸ-ನಿಶ್ವಾಸಗಳೊಂದಿಗೆ ತಮಗೆ ತಾವೇ ಬಂದು ರಥಕ್ಕೆ ಸೇರಿಕೊಂಡು

---

೯. *(i)* ಅಂಗೀರಸರನ್ನು ಕಾರವೋ ನಾಮ ಋಷಯಃ ಎಂದು ಗೋಪಥ ಬ್ರಾಹ್ಮಣ (ಪೂರ್ವಭಾಗ, ಪ್ರಪಾಠಕ ೩) ದಲ್ಲಿ ವರ್ಣಿಸಿದೆ.
*(ii)* ಅಥ ಯದ್ರಾಜಾನಾ ಗವಿಷ್ಟೌ ಸರತ್ಸರಣ್ಯುಃ ಕಾರವೇ ಜರಣ್ಯುಃ ।
ವಿಪ್ರಃ ಪ್ರೇಷ್ಠಃ ಸಹ್ಯೇಷಾಂ ಬಭೂವ ಪರಾ ಚ ವಕ್ಷದುತ ಪರ್ಷದೇನಾನ್ ॥
ಗೋಧನದ ಅನ್ವೇಷಣೆಗಾಗಿ ಹೊರಟ ಶಿಲ್ಪ ಬ್ರಾಹ್ಮಣನಾದ ನಾಭಾನೇದಿಷ್ಟನು ಶಿಲ್ಪಕರ್ಮವನ್ನು ಮಾಡುತ್ತಿದ್ದ ಅಂಗೀರಸ ಗಣವನ್ನು ಸ್ತುತಿಸಿದ್ದರಿಂದ ಅವರ ಪ್ರೇಮವನ್ನು ಗಳಿಸಿಕೊಂಡನು.
*(iii)* ಇನ್ನೂ ಹೆಚ್ಚಿನ ವಿವರಗಳಿಗೆ ನೋಡಿ - ಸಂ : ಜಿ.ಜ್ಞಾನಾನಂದ : ಶ್ರೀ ವಿಶ್ವಕರ್ಮಾನ್ವಯ ಪ್ರದೀಪಿಕಾ, ಪು. ೩೧೯-೩೪೧

೧೦. ನಾಮಲಿಂಗಾನುಶಾಸನ (ಅಮರಕೋಶ), ಬ್ರಹ್ಮವರ್ಗ

೧೧. ಋಗ್ವೇದ ಮಂ ೧:೩:೧೦. ಈ ಮಂತ್ರದ ಅರ್ಥವು ಇಂತಿದೆ:- ಈ ದೇವಿಯು ಶಾರೀರಿಕ ಮಾನಸಿಕ ಮತ್ತು ಬೌದ್ಧಿಕ ರೀತಿಗಳಿಂದ ಪವಿತ್ರಗೊಳಿಸುತ್ತಾಳೆ. ವಿದ್ಯೆಯು ಅನ್ನವನ್ನು ಕೊಡುತ್ತದೆ. ಬಹು ವಿಧವಾದ ಬಲಗಳೂ ಕೂಡ ಇದರಿಂದ ಲಭಿಸುತ್ತದೆ. ಬುದ್ಧಿ ಪೂರ್ವಕವಾಗಿ ನಡೆಸಲ್ಪಡುವ ಎಲ್ಲಾ ಯಜ್ಞ ಮತ್ತು ಶಿಲ್ಪಕರ್ಮಗಳನ್ನು ಈ ದೇವಿಯು ಸಫಲಗೊಳಿಸುತ್ತಾಳೆ.

೧೨. ಸ್ಥಾಪತ್ಯಂ ವಿಶ್ವಕರ್ಮ ಶಾಸ್ತ್ರಂ - ಭಾಗವತಂ, ಸ್ಕಂದ ೪

೧೩. ಸ ಪ್ರಥಮೋ ಸಂಕೃತಿರ್ವಿಶ್ವಕರ್ಮಾ ।
ಸ ಪ್ರಥಮೋ ಮಿತ್ರೋ ವರುಣೋ ಅಗ್ನಿ ಃ ।
ಸ ಪ್ರಥಮೋ ಬೃಹಸ್ಪತಿಶ್ಚಿಕಿತ್ವಾನ್ ॥ - ಯಜುರ್ಬ್ರಾಹ್ಮಣ ಅ೧ :ಪ ೧
ಈ ಮಂತ್ರಕ್ಕೆ ಸಾಯಣಾಚಾರ್ಯರ ಭಾಷ್ಯ - ಸಮೀಚೀ ನಾ ಕೃತಿ ನಿರ್ಮಾಣಂ ಯಸ್ಯಾಸೌಸಂಕೃತಿ ಃ ತಾದೃಶೋ ವಿಶ್ವಕರ್ಮ ನಾಮಕೋದೇವ ಇಂದ್ರ ಏವ ।

ರಥವನ್ನು ಎಳೆದುಕೊಂಡು ಹೋಗುತ್ತಿದ್ದವು. ಇಂತಹ ಬಲವಾದ ರಥ ಮತ್ತು ಕುದುರೆಗಳನ್ನು ಪಡೆದುದರಿಂದ ಮತ್ತು ಬೃಹಸ್ಪತಿಯನ್ನು ಆಚಾರ್ಯನನ್ನಾಗಿ ಸ್ವೀಕರಿಸಿ, ಆತನ ಮಾರ್ಗ ದರ್ಶನದಲ್ಲಿ ವಾಜಪೇಯ ಯಜ್ಞವನ್ನು ಆಚರಿಸಿ, ಇತರ ಎಲ್ಲಾ ದೇವತೆಗಳನ್ನು ಸೋಲಿಸಿ, ದೇವತೆಗಳಲ್ಲಿ ಜ್ಯೇಷ್ಠನಾಗಿ ಸ್ವರ್ಗಾಧಿಪತಿಯಾದ ಪುರಂದರ. ಬೃಹಸ್ಪತಿಗೆ ಸುರಾಚಾರ್ಯತ್ವ ಮತ್ತು ಪುರಂದರನಿಗೆ ಇಂದ್ರಪಟ್ಟ ಮತ್ತು ಸ್ವರ್ಗಾಧಿಪತ್ಯ ಲಭಿಸಿದ ಉದಂತಗಳು ಋಗ್ವೇದ ಸೂಕ್ತಗಳಲ್ಲಿ ಮತ್ತು ಅವುಗಳ ವ್ಯಾಖ್ಯೆಗಳಿಂದ ವಿವರಿತವಾಗಿವೆ.

ಬೃಹಸ್ಪತಿಯು ಕೋಪಗೊಂಡು ಹೋದ ನಂತರ ಇಂದ್ರನಿಗೆ ತನ್ನ ತಪ್ಪು ಮನವರಿಕೆಯಾಯಿತು. ಕೂಡಲೇ ಒಡ್ಡೋಲಗವನ್ನು ಸಮಾಪ್ತಗೊಳಿಸಿ ದೇವಗುರುವಿನ ಕ್ಷಮೆಯನ್ನು ಕೋರಲು ಆತನ ಮನೆಗೆ ಹೋದ. ಇದನ್ನು ಮೊದಲೇ ತನ್ನ ದಿವ್ಯ ದೃಷ್ಟಿಯಿಂದ ತಿಳಿದುಕೊಂಡಿದ್ದ ದೇವಗುರು ತನ್ನ ಆಧ್ಯಾತ್ಮ ವಿದ್ಯೆಯು ಬಲದಿಂದ ತಿರೋಹಿತನಾದ. ಇಂದ್ರನು ಬೃಹಸ್ಪತಿಯನ್ನು ಎಲ್ಲಾ ಕಡೆ ಹುಡುಕಿ ಕಾಣಲಾರದೆ ವಿಫಲನಾಗಿ ತನ್ನ ಅರಮನೆಗೆ ಹಿಂತಿರುಗಿದ. ಇಂದ್ರನನ್ನು ಇನ್ನೂ ಕೆಲವು ಕಾಲ ಪರೀಕ್ಷಿಸ ಬಯಸಿ ಬೃಹಸ್ಪತಿಯು ಇಂದ್ರ ಸಭೆಗೆ ಹೋಗಲಿಲ್ಲ.

ಬೃಹಸ್ಪತಿಯು ಕೋಪದಿಂದ ಇಂದ್ರನಿಂದ ಬೇರೆಯಾಗಿದ್ದಾನೆ ಎಂಬ ವಾರ್ತೆಯನ್ನು ಅರಿತ ದಾನವರು, ತಮಗೆ ಜಯದ ಕಾಲ ಸನ್ನಿಹಿತವಾಗಿದೆ ಎಂದು ಅರಿತು ಇಂದ್ರಲೋಕದ ಮೇಲೆ ಧಾಳಿಯನ್ನು ಪ್ರಾರಂಭಿಸಿದರು.

ಇದರಿಂದ ದೇವತೆಗಳು ದಿಕ್ಕು ಕಾಣದೆ ಹೆದರಿದರು. ಇಂದ್ರನೊಂದಿಗೆ ಬ್ರಹ್ಮಲೋಕಕ್ಕೆ ಹೋಗಿ. ತಮ್ಮ ದುಃಖವನ್ನು, ಅಸಹಾಯಕತೆಯನ್ನು ತೋಡಿಕೊಂಡರು. ಬ್ರಹ್ಮ ದೇವನು ಇಂದ್ರನಿಗೆ ಇಂತು ಹೇಳಿದ : 'ಬ್ರಹ್ಮನಿಷ್ಠನಾದ ಬೃಹಸ್ಪತಿಯು ನಿನ್ನ ಗುರುವು ಎಂಬುದನ್ನು ಮರೆತು ಆತನನ್ನು ಅವಮಾನಿಸಿದೆ. ಆ ದೋಷವೇ ನಿನ್ನನ್ನು ಈಗ ಶತ್ರು ರೂಪದಲ್ಲಿ ಮುತ್ತಿಗೆ ಹಾಕಿದೆ. ನಿನಗೆ ಗುರುವೊಬ್ಬನಿಲ್ಲದೆ ನೀನು ದೈತ್ಯರನ್ನು ಸೋಲಿಸುವುದು ಅಸಾಧ್ಯ. ಮಹಾತಪಸ್ವಾಲಿಯೂ, ಪರಮ ನೈಷ್ಠಿಕನೂ ಆಗಿರುವ ತ್ವಷ್ಟ್ರಪ್ರಜಾಪತಿಯ ಮಗನಾಗ ವಿಶ್ವರೂಪಾಚಾರ್ಯನನ್ನು ಆಶ್ರಯಿಸುವುದೊಂದೇ ಮಾರ್ಗವೇ ಈಗ ಉಳಿದಿದೆ. ಆತನು ಮಾತ್ರವೇ ಈಗ ದೇವತೆಗಳನ್ನು ಉಳಿಸಬಲ್ಲ ಶಕ್ತಿಯನ್ನು ಪಡೆದಿದ್ದಾನೆ. ಆದ್ದರಿಂದ ಆತನ ಬಳಿಗೆ ಹೋಗಿ ಆತನನ್ನು ಪ್ರಾರ್ಥಿಸು.'

ಇಂದ್ರನು ವಿಶ್ವರೂಪಾಚಾರ್ಯನ ಬಳಿಗೆ ಬಂದು ನಮಸ್ಕರಿಸಿ ತನಗೆ ಗುರುವಾಗಿದ್ದು ಈಗ ಒದಗಿರುವ ಶತ್ರು ಕಂಟಕದಿಂದ ತನ್ನನ್ನು ಪಾರು ಮಾಡಬೇಕೆಂದು ಪ್ರಾರ್ಥಿಸಿದ.

ಇಂದ್ರನ ಪ್ರಾರ್ಥನೆಯನ್ನು ಆಲಿಸಿದ ವಿಶ್ವರೂಪಾಚಾರ್ಯನು ಚೆನ್ನಾಗಿ ಯೋಚಿಸಿ ಶತ್ರುಗಳಿಗೆ ಅಭೇದ್ಯವಾಗಿರುವ ಒಂದು ಕವಚವನ್ನು ನಿರ್ಮಿಸಿಕೊಟ್ಟು ಅದಕ್ಕೆ ಅಪ್ರಮೇಯ ಸ್ವರೂಪ, ಮಂತ್ರಗೋಪ್ಯ ಮತ್ತು ಮಹಾಫಲವಾದ ಒಂದು ಮಹಾಮಂತ್ರವನ್ನು ರೂಪಿಸಿ ಉಪದೇಶಿಸಿದ. ಆಗ ಇಂದ್ರನು ಆ ಕವಚವನ್ನು ಧರಿಸಿ ಸ್ವರ್ಗದ ಮೇಲೆ ಧಾಳಿ ನಡೆಸಲು ಬಂದಿದ್ದ ಶತ್ರುಗಳನ್ನು ಜಯಿಸಿದ. ಆದ್ದರಿಂದ ಶತ್ರು ಜಯವನ್ನು ಬಯಸುವವರಿಗೆ ಈ ಮಹಾ ಮಂತ್ರವು ಬಹು ಪರಿಣಾಮಕಾರಿಯಾದ ಕವಚವಾಗಿ ಇಂದಿಗೂ ಉಳಿದು ಬಂದಿದೆ.

ಈ ಮಂತ್ರದಲ್ಲಿ ಮಹಾವಿಷ್ಣುವು ಸ್ತುತಿಸಲ್ಪಡುತ್ತಾನೆ. ಆತನು ಈ ಮಂತ್ರದಲ್ಲಿ ಚತುರ್ಭುಜನಲ್ಲ- ಅಷ್ಟಭುಜಮೂರ್ತಿ. ಲೌಕಿಕ ಫಲಗಳನ್ನು ಬಯಸಿ ಉಪಾಸಿಸುವಾಗ ತಮ್ಮ ಇಷ್ಟದೈವಗಳಿಗೆ ಉಪಾಸಕರು ಶಾಸ್ತ್ರಗಳಲ್ಲಿ ಹೇಳಿರುವ ಪ್ರಕಾರ ಹಲವು ತಲೆಗಳನ್ನು, ತೋಳುಗಳನ್ನು, ಆಯುಧಗಳನ್ನು ರೂಪಿಸಿಕೊಂಡು ತಮ್ಮ ಉದ್ದೇಶಗಳನ್ನು ಅರಿಕೆ ಮಾಡಿಕೊಂಡು ಧ್ಯಾನ ಮಾಡುತ್ತಾರೆ.

ಈ ಮಂತ್ರದಲ್ಲಿ ವಿಷ್ಣುವಿನ ಮತ್ಸ್ಯ-ವಾಮನ - ನೃಸಿಂಹ - ವರಾಹ - ಶ್ರೀರಾಮ - ನಾರಾಯಣ - ನರ - ದತ್ತಾತ್ರೇಯ- ಕಪಿಲ - ಹಯಗ್ರೀವ - ನಾರದ - ಕೂರ್ಮ - ಧನ್ವಂತರಿ - ಋಷಭ - ದ್ವೈಪಾಯನ - ಬುದ್ಧ - ಕಲ್ಕಿ ಎಂಬ ಅವತಾರ ಮೂರ್ತಿಗಳನ್ನು ಧ್ಯಾನಿಸಲಾಗಿದೆ.

ಕೇಶವ - ನಾರಾಯಣ - ಗೋವಿಂದ - ವಿಷ್ಣು - ಮಧುಸೂದನ - ತ್ರಿವಿಕ್ರಮ - ವಾಮನ - ಹೃಷೀಕೇಶ - ಪದ್ಮನಾಭ - ಶ್ರೀ ವತ್ಸ - ಸರ್ವೇಶ್ವರ - ಜನಾರ್ದನ - ವಿಶ್ವೇಶ್ವರ - ಕಾಲಮೂರ್ತಿಗಳ ರೂಪಗಳನ್ನು, ಆಭೂಷಣಗಳನ್ನು, ಆಯುಧಗಳನ್ನು, ಲಿಂಗವನ್ನು ಧರಿಸಿರುವ ಪರಮೇಶ್ವರನನ್ನು ಸುದರ್ಶನ, ಪಾಂಚ ಜನ್ಯ, ನಂದಕ, ಚರ್ಮ (ಗುರಾಣಿ) ಎಂಬ ಭಗವನ್ನಾಮ ರೂಪಿ ದಿವ್ಯಾಸ್ತ್ರಗಳನ್ನು, ದಿವ್ಯ ಆಯುಧ ಮತ್ತು ಶ್ರೀ ಹರಿಯ ವಾಹನಗಳನ್ನು ಸ್ತುತಿಸಲಾಗಿದೆ.

ಸನತ್ಕುಮಾರ, ಅಗ್ನಿ, ಯಮ, ಶೇಷ, ಖಗೇಂದ್ರ ಇವರನ್ನು ಶತ್ರು ನಾಶಾರ್ಥ ಸ್ತುತಿಸಿದ್ದಾರೆ. ಇದು ಕವಚವಾದುದರಿಂದ ಕೇವಲ ರಕ್ಷಣ ದೇವತೆಗಳನ್ನು ಮಾತ್ರವೇ ಹೇಳಲಾಗಿದೆ. ಆದರೆ ಗೃಹಸ್ಥನಾದವನು ತನ್ನ ಅವಶ್ಯಕತೆಗಳಿಗಾಗಿ ಇನ್ನೂ ಅನೇಕ ದೇವತೆಗಳನ್ನು ಪ್ರಾರ್ಥಿಸಬೇಕಾಗಿರುತ್ತದೆ[೧೪].

ಸ್ವಾಮಿ ದಯಾನಂದ ಸರಸ್ವತಿ ಅವರು 'ಇದು ವಿಶ್ವರೂಪಾಚಾರ್ಯರು ಇಂದ್ರನಿಗೆ ಆಗ ತಯಾರಿಸಿಕೊಟ್ಟ ನಿಜವಾದ ಕವಚವೇ' ಎಂದು ಹೇಳುತ್ತಾರೆ. ಬಹುಮುಖ್ಯವಾದ ಷಡಕ್ಷರಿ, ಅಷ್ಟಾಕ್ಷರಿ, ದ್ವಾದಶಾಕ್ಷರಿ ಎಂಬ ಮೂರು ಮಂತ್ರಗಳ ಸಂಪುಟವು ಇದರಲ್ಲಿದೆ. ಇದರಲ್ಲಿರುವ ಬಗೆ ಬಗೆಯ ಅಂಗನ್ಯಾಸಗಳನ್ನು ಗಮನಿಸಿದರೆ ಉರಸ್ತ್ರಾಣ, ಶಿರಸ್ತ್ರಾಣ, ಅಧಸ್ತ್ರಾಣ ವೆಂಬ ಮೂರು ಭಾಗಗಳಿರುವುದು ತೋರಿಬರುತ್ತದೆ. ಈ ಕವಚದಲ್ಲಿರುವ ಬೀಜಾಕ್ಷರ ಸಂಪುಟಿಯು ಇಂದಿನ ಆಧುನಿಕ ಜಗತ್ತಿನ ನಂಬರ್ ಲಾಕ್ ನಂತಹುದು. ಆ ಕಾಲದಲ್ಲಿ ಇಂದ್ರನು ಈ ಕವಚವನ್ನು ಧರಿಸಿ ಶತ್ರು ವಿಜಯವನ್ನು ಸಾಧಿಸಿದ.

ಪ್ರಾಚೀನರು ಜಪಮಾಲೆ, ತಾಯಿತ ಮುಂತಾದ ಯಾವುದನ್ನು ಧರಿಸಿದರೂ ಆಯಾ ಅಧಿದೇವತೆಗಳನ್ನು ಪೂಜಿಸಿ, ಅದಕ್ಕೆಂದು ನಿರ್ಣಯವಾಗಿರುವ ಮಂತ್ರವನ್ನು ಜಪಿಸಿದ ನಂತರವೇ ಅವನ್ನು ಧರಿಸುತ್ತಿದ್ದರು. ಇಂದೂ ಕೂಡ ಅವನ್ನು ಆ ಬಗೆಯಾಗಿ ಧರಿಸಿದಾಗ ಮಾತ್ರವೇ ಸಕ್ರಮವಾದ ಫಲವನ್ನು ಅವು ಕೊಡಬಲ್ಲವು. ಆದ್ದರಿಂದ ಇದರಲ್ಲಿ ಇಂದ್ರನು ಧರಿಸಿದ ಕವಚಕ್ಕೆ ಅಧಿದೇವತೆಯಾಗಿರುವ ಶ್ರೀಮನ್ನಾರಾಯಣನ

---

೧೪. (ಅ) ಗೃಹಸ್ಥನು ತನ್ನ ಕಾಮ್ಯಾರ್ಥಸಿದ್ಧಿಗಾಗಿ ಪೂಜಿಸಬೇಕಾಗಿರುವ ದೇವತೆಗಳು (ಆ) ಗೃಹಸ್ಥನು ತನ್ನ ರಕ್ಷಣೆಗಾಗಿ ಪೂಜಿಸಬೇಕಾಗಿರುವ ದೇವತೆಗಳು. ವಿವರಗಳನ್ನು ಕೋಷ್ಟಕ ರೂಪದಲ್ಲಿ ಮುಂದಿನ ಪುಟದಲ್ಲಿ ಕೊಟ್ಟಿದೆ. ⟶

ಉಪಾಸನೆಯನ್ನು ಹೇಳಲಾಗಿದೆ. ಕವಚವು ದೇಹವನ್ನು ರಕ್ಷಿಸಿದರೆ, ಉಪಾಸನೆಯು ದೇಹಿಯನ್ನು ರಕ್ಷಿಸುತ್ತದೆ.

ಆಶ್ರಮಗಳ ನೆರಳನ್ನು, ದೇವಾಲಯಗಳ ನೆರಳನ್ನು, ಮಹಾಪುರುಷರ ಮತ್ತು ಗುರುಗಳ ನೆರಳನ್ನು ದಾಟಬಾರದೆಂಬುದು ಪ್ರಾಚೀನರ ಮಾತು. ಇದರಿಂದ ದಾಟಿದವರಿಗೆ ಅನಿಷ್ಟಗಳು ಉಂಟಾಗುತ್ತವೆ ಎಂದು ಹೇಳುತ್ತಾರೆ. ಇದರ ವಿವರವನ್ನು 'ಶ್ರೀರಂಗಂ ಮಹಾತ್ಮೆ'ಯಲ್ಲಿ ವಿವರಿಸಿದ್ದಾರೆ.

ಪೂರ್ವಕಾಲದಲ್ಲಿ ವಿಶ್ವಾವಸು ಎಂಬ ಗಂಧರ್ವನು ಕನ್ಯೆಯಾಗಿದ್ದ ದೇವ ಹೂತಿಯನ್ನು ಕಾಮ ದೃಷ್ಟಿಯಿಂದ ನೋಡಿ ಪತನ ಅನುಭವಿಸಿದ. ಚಿತ್ರಸೇನನೆಂಬ ಗಂಧರ್ವನು ಶ್ರೀರಂಗಂ ದೇವಾಲಯದ ವಿಮಾನವನ್ನು ನಿರ್ಲಕ್ಷ್ಯವಾಗಿ ಕಂಡ. ಅದರ ನೆರಳನ್ನು ದಾಟಿ ಪತನವನ್ನು ಅನುಭವಿಸಿದ.

---

| (ಅ)ಕಾಮ್ಯಾರ್ಥ ಸಿದ್ಧಿ | | | (ಆ)ಆತ್ಮ ರಕ್ಷಣೆ | | |
|---|---|---|---|---|---|
| ಕ್ರಮ | ಬಯಕೆ | ಸಿದ್ಧಿಗಾಗಿ ಪೂಜಿಸ ಬೇಕಾಗಿದ ದೇವತೆ | ಕ್ರಮ | ಸ್ಥಳ | ಗೃಹಸ್ಥನನ್ನು ರಕ್ಷಿಸುವ ದೇವತೆಗಳು |
| ೧ | ಲಕ್ಷ್ಮೀ (ಶ್ರೀ) | ದುರ್ಗೆ | ೧ | ನೀರಿನಲ್ಲಿ | ಮತ್ಸ್ಯಮೂರ್ತಿ |
| ೨ | ಆಯಸ್ಸು | ಅಶ್ವಿನಿಗಳು | ೨ | ಸುಂದರ ಸ್ಥಳ | ತ್ರಿವಿಕ್ರಮ |
| ೩ | ಇಂದ್ರಿಯ ಕಾಮಿ | ಇಂದ್ರ | ೩ | ತೊಂದರೆಯ ಸ್ಥಳ | ನೃಸಿಂಹ |
| ೪ | ಕಾಮಿನೀ ಕಾಯ | ಊರ್ವಶಿ | ೪ | ಬೆಟ್ಟದ ತುದಿಯಲ್ಲಿ | ಭಾರ್ಗವರಾಮ |
| ೫ | ಕೀರ್ತಿಕಾಯ | ಯಜ್ಞಪುರುಷ | ೫ | ಪ್ರವಾಸದಲ್ಲಿ | ಶ್ರೀರಾಮ |
| ೬ | ತೇಜಸ್ಸು | ಅಗ್ನಿದೇವ | ೬ | ಅಭಿಚಾರವಾಗಿದೆ ಎಂಬ ಅನುಮಾನವಾದಾಗ | ನಾರಾಯಣ |
| ೭ | ದಾಂಪತ್ಯ ಪ್ರೀತಿ | ಉಮಾದೇವಿ | ೭ | ಗರ್ವಭಾವದಲ್ಲಿ (ಅಹಂಕಾರದಲ್ಲಿ) | ನರನು |
| ೮ | ಪ್ರಜಾಸಾಧನೆ | ಸಾಧ್ಯರು | ೮ | ಯೋಗಭ್ರಂಶದಲ್ಲಿ | ದತ್ತಾತ್ರೇಯ |
| ೯ | ಧರ್ಮಾರ್ಥಕಾಮಗಳು | ವಿಷ್ಣು | ೯ | ಕರ್ಮಬಂಧದಲ್ಲಿ | ಕಪಿಲ |
| ೧೦ | ಪುಷ್ಟಿ | ಭೂದೇವಿ | ೧೦ | ಕಾಮ ಉಂಟಾದಾಗ | ಸನತ್ಕುಮಾರ |
| ೧೧ | ಮಕ್ಕಳು | ಪ್ರಜಾಪತಿಗಳು | ೧೧ | ದೇವ ಹೇಳನದಲ್ಲಿ | ಹಯಗ್ರೀವ |
| ೧೨ | ಪ್ರತಿಷ್ಠೆ | ಗಗನಭೂದೇವತೆಗಳು | ೧೨ | ಪೂಜೆಯು ಭಗ್ನ ವಾಗಲಿರುವಾಗ | ನಾರ |
| ೧೩ | ಬಲ | ಮರುದ್ಗಣಗಳು | ೧೩ | ದುರ್ಗತಿಯಲ್ಲಿ | ಕೂರ್ಮ |
| ೧೪ | ಭೋಗ | ಚಂದ್ರ | ೧೪ | ಅಪಥ್ಯದಲ್ಲಿ | ಧನ್ವಂತರಿ |
| ೧೫ | ಭೋಜನ | ಅದಿತಿದೇವಿ | ೧೫ | ದ್ವಂದ್ವದಲ್ಲಿ | ಋಷಭ |
| ೧೬ | ಬ್ರಹ್ಮವರ್ಚಸ್ಸು | ಚತುರ್ಮುಖ ಬ್ರಹ್ಮ | ೧೬ | ಅಪವಾದದ ಸಂದರ್ಭ | ಅಗ್ನಿದೇವ |
| ೧೭ | ರಕ್ಷೆ | ಯಕ್ಷ | ೧೭ | ಜನನ-ಮರಣಾದಿಗಳಲ್ಲಿ | ಬಲಭದ್ರ |
| ೧೮ | ರಾಜತ್ವ | ಮನು | ೧೮ | ಮರಣದಲ್ಲಿ | ಯಮನು |
| ೧೯ | ರಾಜ್ಯ | ವಿಶ್ವೇದೇವತೆಗಳು | ೧೯ | ಸರ್ಪಗಣ | ಶೇಷ |
| ೨೦ | ಹಣಸಂಗ್ರಹ | ಪ್ರಚೇತಸ | ೨೦ | ದಿಕ್ಕುತೋರದಾಗ | ದ್ವೈಪಾಯನ |
| ೨೧ | ವಿದ್ಯೆ | ಉಮಾವಲ್ಲಭ (ದಕ್ಷಿಣಾಮೂರ್ತಿ) | ೨೧ | ಪಾಷಂಡಿಗಳ ಮಧ್ಯೆ | ಬುದ್ಧ |
| ೨೨ | ವಿದ್ಯೆ (ಶಕ್ತಿ) | ರುದ್ರರು | ೨೨ | ಶನೈಶ್ಚರ | ಕಲ್ಕಿ |
| ೨೩ | ಶತ್ರುಮರಣ | ನಿರ್ಋತಿ | ೨೩ | ಭೋಜನದಲ್ಲಿ | ಯಜ್ಞಭೋಕ್ತ |
| ೨೪ | ಸಂತಾನ | ಪಿತೃಗಳು | ೨೪ | ಆಟಗಳಲ್ಲಿ | ಗೋವಿಂದ |
| ೨೫ | ಎಲ್ಲಾ ಕಾಮನೆಗಳು | ಆದಿತ್ಯರು | ೨೫ | ಬುದ್ಧಿಭ್ರಮಣೆಯಲ್ಲಿ | ಪೃಶ್ನೀಗರ್ಭ |
| ೨೬ | ಸರ್ವಾಧಿಪತ್ಯ | ಬ್ರಹ್ಮ | | | |

ನಾರಾಯಣ ಕವಚವನ್ನು ಅದರ ಮಂತ್ರವನ್ನು ಕೌಶಿಕನೆಂಬ ಬ್ರಾಹ್ಮಣನು ಭಕ್ತಿಯಿಂದ ಒಂದು ಏಕಾಂತ ಪ್ರದೇಶದಲ್ಲಿ ಅನುಷ್ಠಾನ ಮಾಡುತ್ತಿದ್ದ. ಅಲ್ಲಿಯೇ ಆತನ ಅಂತ್ಯಕಾಲ ಬಂದದ್ದರಿಂದ ದೇಹವನ್ನು ಬಿಟ್ಟು ಹೋದ. ಕೆಲವು ದಿನಗಳಿಗೆ ಕಾಯವು ಶಿಥಿಲವಾಗಿ ಅಲ್ಲಿ ಕೇವಲ ಅಸ್ಥಿಗಳು ಮಾತ್ರವೇ ಉಳಿದವು. ಒಮ್ಮೆ ಆ ದಾರಿಯಲ್ಲಿ ಚಿತ್ರರಥನೆಂಬ ಗಂಧರ್ವನು ವಿಮಾನದಲ್ಲಿ ತನ್ನ ಪತ್ನಿಯರೊಂದಿಗೆ ಆಕಾಶ ಮಾರ್ಗದಲ್ಲಿ ವಿಹಾರಾರ್ಥವಾಗಿ ಹೋಗುತ್ತಿದ್ದ. ಆಗ ಅವನ ವಿಮಾನದ ನೆರಳು ಕೌಶಿಕನ ಅಸ್ಥಿಗಳ ಮೇಲೆ ಬಿದ್ದುದರಿಂದ ಕೂಡಲೇ ವಿಮಾನವು ಭೂಮಿಗೆ ಸೆಳೆಯಲ್ಪಟ್ಟಿತು.

ತನ್ನ ವಿಮಾನವು ಭೂಮಿಯ ಮೇಲೆ ಬಿದ್ದುದಕ್ಕೆ ಕಾರಣಗೊತ್ತಿಲ್ಲದ ಚಿತ್ರರಥನು ಕಳವಳಗೊಂಡ. ಅದೇ ಸಮಯಕ್ಕೆ ಆ ದಾರಿಯಲ್ಲಿ ವಾಲಾಖಿಲ್ಯ ಮಹರ್ಷಿಗಳು ಬಂದರು. ಅವರನ್ನು ಕಂಡ ಚಿತ್ರರಥನು ಆ ಮಹರ್ಷಿಗಳಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ತನ್ನ ವಿಮಾನದ ಪತನಕ್ಕೆ ಕಾರಣವನ್ನು ಮತ್ತು ಪರಿಹಾರವನ್ನು ಕೇಳಿದ. ಮಹರ್ಷಿಯು ದಿವ್ಯದೃಷ್ಟಿಯಿಂದ ನೋಡಿ ಮಹಾಪುಣ್ಯಾತ್ಮನೂ, ನಾರಾಯಣ ಕವಚಾನುಷ್ಠಾನ ಪರನೂ ಆದ ಕೌಶಿಕನ ಅಸ್ಥಿಗಳು ಇಲ್ಲಿವೆ. ಈ ಅಸ್ಥಿಗಳ ಮೇಲಿಂದ ನೀನು ಹೋಗುತ್ತಿದ್ದೆ. ಆ ಕವಚದ ಪ್ರಭಾವದಿಂದ ವಿಮಾನವು ಭೂಮಿಗೆ ಸೆಳೆಯಲ್ಪಟ್ಟಿತು. ನೀನು ಈ ಅಸ್ಥಿಗಳನ್ನು ತೆಗೆದುಕೊಂಡು ಹೋಗಿ ಪೂರ್ವವಾಹಿನಿಯಾಗಿರುವ ಸರಸ್ವತಿ ನದಿಯಲ್ಲಿ ಬೆರೆಸು, ಅದರ ಫಲವಾಗಿ ಕವಚದ ಪ್ರಭಾವದಿಂದ ನೀನು ಮುಕ್ತನಾಗುತ್ತೀಯೆ. ಇದರ ವಿನಾ ಬೇರೆಯ ಮಾರ್ಗ ಯಾವುದೂ ಇಲ್ಲ ಎಂದು ಹೇಳಿದರು. ಚಿತ್ರರಥನು ಮಹರ್ಷಿಯ ಸೂಚನೆಯನ್ನೇ ಅನುಸರಿಸಿದ. ಅಸ್ಥಿಗಳನ್ನು ಸರಸ್ವತೀ ನದಿಯಲ್ಲಿ ಬಿಟ್ಟು ಸ್ನಾನಾಚಮನ ತರ್ಪಣಗಳನ್ನು ನಡೆಸಿದ. ಇದರಿಂದ ಕವಚದ ಪ್ರಭಾವದಿಂದ ಮುಕ್ತನಾದ ಚಿತ್ರರಥನು ಮೊದಲಿನಂತೆ ತನ್ನ ವಿಮಾನದಲ್ಲಿ ಪ್ರಯಾಣವನ್ನು ಮುಂದುವರಿಸುವುದು ಸಾಧ್ಯವಾಯಿತು.

ವ್ಯಕ್ತಿಗಳು ಸತ್ತಾಗ ಶವವನ್ನು ಅವರವರ ಮತಾನುಸಾರ ಅಗ್ನಿ ಸಂಸ್ಕಾರವನ್ನೋ, ಭೂ ಸ್ಥಾಪನೆಯನ್ನೋ ಮಾಡುತ್ತಾರೆ. ಪಾರ್ಸಿಗಳು ಶವವನ್ನು ಹದ್ದುಗಳಿಗೆ ಬಿಡುತ್ತಾರೆ. ಗಂಗಾ ನದಿಯ ತೀರಗಳಲ್ಲಿ ಇರುವವರು ಶವವನ್ನು ನದಿಯಲ್ಲಿ ತೇಲಿ ಬಿಡುತ್ತಾರೆ. ಈ ರೀತಿಯಲ್ಲದೆ ಜೀವಂತವಾಗಿ ಇರುವಾಗಲೇ ಸಮಾಧಿಯನ್ನು ಪ್ರವೇಶಿಸಿದ ಯೋಗಿಗಳೂ ಉಂಟು. ಅಂತಹವರಲ್ಲಿ ದಕ್ಷಿಣ ಭಾರತದಲ್ಲಿ ಹೊಸೂರಿನ ಶ್ರೀ ಸುಜ್ಞಾನ ಪ್ರಭುಗಳು (ಸಮಾಧಿಸ್ಥಳ : ಅರೆಮಾದನಹಳ್ಳಿ), ಪಾಪಘ್ನಿಯ ವೀರಭೋಜಾಚಾರ್ಯರು, ಕಂದಿಮಲ್ಲಯ್ಯ ಪಲ್ಲೆಯ ಪೋತಲೂರು ವೀರಬ್ರಹ್ಮೇಂದ್ರ ಸ್ವಾಮಿಗಳು, ತಿಂಥಿಣಿಯ ಮೌನೇಶ್ವರರು, ಮಂತ್ರಾಲಯದ ರಾಘವೇಂದ್ರ ಸ್ವಾಮಿಗಳು ಮುಖ್ಯರು.

ಸಜೀವವಾಗಿ ಸಮಾಧಿಯನ್ನು ಪ್ರವೇಶಿಸಿದವರು ಎಷ್ಟು ಕಾಲ ಜೀವಂತ ವಾಗಿರಬಲ್ಲರೋ ನಾವು ನಿಖರವಾಗಿ ಹೇಳುವುದು ಸಾಧ್ಯವಿಲ್ಲ. ಆದರೆ ***ಜಾತಸ್ಯ ಮರಣಂ ಧ್ರುವಂ*** ಎಂಬುದು ಕಾಲದೊಂದಿಗೆ ಬದಲಾಗದ ಸತ್ಯ. ಹುಟ್ಟಿದವರಿಗೆ ಸಾವು ಒಂದಲ್ಲ

ಒಂದು ದಿನ ಬರಲೇ ಬೇಕು. ನದಿಯನ್ನು ದಾಟಿದ ನಂತರ ನಾವೆಯ ಅವಶ್ಯಕತೆ ಇಲ್ಲದೆ ಇರುವಂತೆ ಜೀವನು ಮಾನವ ದೇಹದಿಂದ ಸಾಧಿಸಬೇಕಾಗಿರುವ ಗುರಿಯನ್ನು ಸಾಧಿಸಿದ ನಂತರ ಆ ದೇಹವನ್ನು ಕೇವಲ ಕರ್ಮಶೇಷಕ್ಕಾಗಿ ಮಾತ್ರವೇ ಭರಿಸಬೇಕು. ಹಾಲು ಕುಡಿದ ನಂತರವೂ ಯಾರು ತಾನೇ ಬಟ್ಟಲನ್ನು ಕೈಯಲ್ಲಿಯೇ ಇರಿಸಿಕೊಂಡಿರುತ್ತಾರೆ? ಜೀವನ್ಮುಕ್ತನಾದವನು ಈ ದೇಹದಿಂದ ಎಂದಿಗೆ 'ತಾನು ಮುಕ್ತನಾಗುತ್ತೇನೊ!' ಎಂದೇ ಕಾಯುತ್ತಿರುತ್ತಾನೆ. ತನ್ನ ಕಾರ್ಯವು ಮುಗಿದ ನಂತರವೂ ಈ ಕಾಯವನ್ನು ಹೊತ್ತು ತಿರುಗುವುದನ್ನು ಜೀವನು ಇಷ್ಟಪಡುವುದಿಲ್ಲ.

ಸಾವಿನ ನಂತರ ದಹನ ಮಾಡುವುದೇ ಒಳ್ಳೆಯ ಪದ್ಧತಿ. ಜೀವನಿಗೆ ತನ್ನ ಶರೀರದ ಮೇಲೆ, ವಸ್ತು ವಾಹನಗಳ ಮೇಲೆ ಇರುವ ಮಮಕಾರವು ಬಹು ಘನಿಷ್ಠವಾದುದು. ಆದ್ದರಿಂದ ಜೀವನು ಭೌತಕಾಯವನ್ನು ಬಿಟ್ಟರೂ ಅದರ ಸುತ್ತಲೂ ಕೆಲವು ಕಾಲ ಭ್ರಮಿಸುತ್ತಲೇ ಇರುತ್ತಾನೆ. ಇದನ್ನು ಸಾಮಾನ್ಯರು ದೆವ್ವ ಎಂದು ಕರೆಯುತ್ತಿರುತ್ತಾರೆ. ದೆವ್ವಗಳ ಕಥೆಗಳು ಕೇವಲ ಭಾರತೀಯ ಸಾಹಿತ್ಯದಲ್ಲಿ ಮಾತ್ರವೇ ಅಲ್ಲ ವಿಶ್ವದಾದ್ಯಂತ ಎಲ್ಲಾ ದೇಶಗಳಲ್ಲೂ ದೊರೆಯುತ್ತವೆ. ಜೀವನು ತನ್ನ ವಸ್ತು ವಾಹನಗಳ ಸುತ್ತೂ ಮಾತ್ರವೇ ಅಲ್ಲ ತನಗೆ ಆಪ್ತರಾಗಿರುವವರ ಸುತ್ತಲೂ ಒಮ್ಮೆ ಸುತ್ತಿ ಹೋಗುತ್ತಾನಂತೆ. ಆದ್ದರಿಂದ ಹಿಂದೂಗಳಲ್ಲಿ ಆ ಹತ್ತು ದಿನಗಳನ್ನು **ಮೃತಾಶೌಚ** ದಿನಗಳಾಗಿ ಆಚರಿಸುತ್ತಾರೆ.

ಜೀವನಿಗೆ ತಾನು ಬಳಸುವ ವಸ್ತುಗಳ ಮೇಲೆ ಮಮಕಾರ ಇರುವುದರಿಂದಲೇ ಆದಿ ಮಾನವರು ಶವದೊಂದಿಗೆ ಆತನು ಬಳಸುವ ವಸ್ತುಗಳನ್ನು ಸಮಾಧಿಗಳಲ್ಲಿ ಇರಿಸುತ್ತಿದ್ದರು. ಬಹುಶಃ ಸತ್ತವನು ದೆವ್ವವಾಗಿ ತಮ್ಮ ಮನೆಯನ್ನು ಪ್ರವೇಶಿಸಬಾರದು ಎಂಬುದು ಅವರ ನಂಬಿಕೆಯೇನೋ? ಈ ರೀತಿಯಾಗಿ ಕೇವಲ ವಸ್ತುಗಳಲ್ಲ, ಕೊನೆಗೆ ಅವರು ವಾಸಿಸುವ ಮನೆಯನ್ನು ಇರಿಸಬಾರದು ಎಂಬ ನಂಬಿಕೆಯು ಹಿಂದೂಗಳು ಚಟ್ಟವನ್ನು ನಿರ್ಮಿಸಬೇಕಾಗಿರುವ ಕ್ರಮವು ತಿಳಿಸುತ್ತದೆ. ಚಟ್ಟವನ್ನು ಒಂದು ಮನೆಯ ಗಳುವನ್ನು, ಇನ್ನೊಂದು ಹೊರಗಿನ ಗಳುವನ್ನು ಬಳಸಿ ನಿರ್ಮಿಸಲಾಗುತ್ತದೆ. ಇದರ ಮೇಲೆ ಮನೆಯ ಸೂರಿಗೆ ಬಳಸಿರುವ ಒಂದು ಹೆಂಚನ್ನೂ ಇರಿಸುವ ರೂಢಿ ಇತ್ತು. ಆರ್‌ಸಿಸಿ ಕಟ್ಟಡಗಳು ಹೆಚ್ಚಾದ ನಂತರ ಈ ಕ್ರಮ ರೂಢಿಯಿಂದ ದೂರವಾಗಿದೆ.

ಜೀವನು ಅಭಿಮಾನಿಸುವ ವಸ್ತುಗಳನ್ನು ಸಾವಿನ ನಂತರ ಅವನೊಂದಿಗೆ ಕಳುಹಿಸುವುದೇ ಒಳ್ಳೆಯ ಕ್ರಮ. ಶವವನ್ನು ಸಮಾಧಿ ಮಾಡುವುದಕ್ಕಿಂತಲೂ ಅಗ್ನಿಗೆ ಅರ್ಪಿಸಿದಾಗ ಜೀವನು ಆ ದೃಶ್ಯವನ್ನು ತಾನೇ ನೇರವಾಗಿ ನೋಡುತ್ತಾನೆ. ಆದ್ದರಿಂದ ದೇಹದ ಮೇಲೆ ಮಮಕಾರವನ್ನು ತ್ಯಜಿಸಿ ತಾನು ಹೋಗಬೇಕಾಗಿರುವ ಸ್ಥಳಕ್ಕೆ ಹೋಗುತ್ತಾನೆ. ಸಮಾಧಿ ಮಾಡಿದಾಗ ಜೀವನು ಆ ದೇಹದ ಸುತ್ತಲೂ ಕೆಲವು ಕಾಲ ಸುತ್ತುವ ಸಾಧ್ಯತೆ ಇರುತ್ತದೆ. ಆದ್ದರಿಂದ ದೇಹವನ್ನು ಸಮಾಧಿ ಮಾಡುವುದು ಎಂದರೆ ಅದನ್ನು ತೊರೆದು ಹೊರ ಬಂದ ಜೀವನನ್ನು ಮತ್ತೆ ಸ್ವಲ್ಪ ಕಾಲ ಬಂಧಿಸುವುದೇ ಆಗಿರುತ್ತದೆ. ಆದ್ದರಿಂದಲೇ ಪ್ರಾಚೀನರು ದೇಹವನ್ನು ಸುಟ್ಟ ನಂತರ ಅದರ ಅವಶೇಷಗಳೂ ಕೂಡ ಇಲ್ಲದಂತೆ ಅಸ್ಥಿಗಳನ್ನು ಸಂಗ್ರಹಿಸಿ ಅದನ್ನು ಗಂಗೆಯಲ್ಲಿ ವಿಸರ್ಜಿಸುತ್ತಿದ್ದರು. ಆಗ ಆ ಜೀವಿಗೆ ಮುಕ್ತಿ.

ಗಂಗಾನದಿಯನ್ನು ಸತ್ತವರಿಗೆ ಮುಕ್ತಿ ದೊರಕಿಸಲೆಂದೇ ಸ್ವರ್ಗಲೋಕದಿಂದ ಭೂಮಿಗೆ ಭಗೀರಥನು ಕರೆದುಕೊಂಡು ಬಂದ. ಗಂಗೆಯು ವಿಷ್ಣುವಿನ ಪಾದದಿಂದ ಹುಟ್ಟಿ ಬಂದವಳಾದ್ದರಿಂದ ಅಸ್ಥಿಗಳನ್ನು ಗಂಗೆಯಲ್ಲಿ ಬೆರೆಸಿದರೆ ಸತ್ತವರ ದೇಹವನ್ನು ವಿಷ್ಣುವಿನ ಪಾದ ಸನ್ನಿಧಿಗೆ ಸೇರಿಸಿದ ಫಲವು ದೊರೆಯುತ್ತದೆ. ಒಂದು ವೇಳೆ ಅಸ್ಥಿಗಳು ಭೂಮಿಯ ಮೇಲೆಯೇ ಉಳಿದರೆ ಅವು ಆ ಭೂಮಿಗೆ ದೋಷವನ್ನು ಆಪಾದಿಸುತ್ತವೆ. ಆದ್ದರಿಂದಲೇ ವಾಸ್ತುಶಾಸ್ತ್ರದಲ್ಲಿ ಭೂಶುದ್ಧಿಯು ಒಂದು ಭಾಗವಾಗಿ ಅಸ್ಥಿಶೋಧನೆಯು ರೂಪುಗೊಂಡಿದೆ. ಹೊಸ ಮನೆ, ಆಲಯ ಅಥವಾ ಗ್ರಾಮವನ್ನು ನಿರ್ಮಿಸುವಾಗ ಆ ಸ್ಥಳದಲ್ಲಿ **ಶಲ್ಯಶುದ್ಧಿ**ಗಾಗಿ ಶೋಧನೆಯನ್ನು ನಡೆಸುತ್ತಾರೆ. ಗಂಗಾಜಲಕ್ಕೆ ಈ ರೀತಿಯ ದೋಷಗಳನ್ನು ಹರಣಮಾಡುವ ಶಕ್ತಿ ಭಾವನಾತ್ಮಕವಾಗಿ ಮಾತ್ರವೇ ಅಲ್ಲದೆ ಭೌತಿಕವಾಗಿಯೂ ಇದೆ. ಆದ್ದರಿಂದಲೇ ಸತ್ತವರ ಅಸ್ಥಿಗಳನ್ನು ಗಂಗೆಯಲ್ಲಿ ಬಿಡುವುದು ಎಂದರೆ ಅದರ ಮೂಲಕ ಆ ಸ್ಥಳವನ್ನು ಶಲ್ಯದೋಷದಿಂದ ರಕ್ಷಿಸುವ ಕೆಲಸವೂ ನೆರವೇರುತ್ತದೆ.

ವ್ಯಕ್ತಿಯ ಗುಣಗಳನ್ನು ಅನುಸರಿಸಿ ಆತನ ಮೂಳೆಗಳಲ್ಲೂ ಕೆಲವು ವಿಶೇಷವೂ ವಿಶಿಷ್ಟವೂ ಆದ ಗುಣಗಳಿರುತ್ತವೆ. ಆದ್ದರಿಂದಲೇ ಮಾಂತ್ರಿಕರು ತಮ್ಮ ಪ್ರಕ್ರಿಯೆಗಳಿಗೆ ಕಪಾಲ ಮುಂತಾದುವನ್ನು ಬಳಸುತ್ತಾರೆ. ಅವರು ಮೂಳೆಗಳನ್ನು ಧರಿಸುವುದೂ ಉಂಟು. ತಂತ್ರಶಾಸ್ತ್ರದಲ್ಲಿ ಪೂಜಿಸಲ್ಪಡುವ ಕಾಳಿ, ರುದ್ರ, ಭೈರವ ಮುಂತಾದ ದೇವತೆಗಳು ಕಪಾಲ ಹಾರಗಳನ್ನು, ರುಂಡ ಮಾಲೆಯನ್ನು, ಅಸ್ಥಿ ಮಾಲಿಕೆಗಳನ್ನು ಧರಿಸಿರುತ್ತಾರೆ.

ಮೂಳೆಗಳಲ್ಲಿ ವಿಶಿಷ್ಟವಾದ ಗುಣಗಳು ಇರುತ್ತವೆ ಎಂಬುದಕ್ಕೆ ದಧೀಚಿ ಎಂದು ರೂಢಿಯಲ್ಲಿ ಕರೆಯಲ್ಪಡುವ ದಧ್ಯಙ್ ಆಥರ್ವಣ ಮಹರ್ಷಿಯ ಮೂಳೆಗಳನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ವೃತ್ರಾಸುರನನ್ನು ಕೊಲ್ಲಲು ಬಯಸಿದಾಗ ಇಂದ್ರನಿಗೆ ವಜ್ರಾಯುಧವನ್ನು ತಕ್ಷಣೇ ತಯಾರಿಸಿದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಇದು ಒಂದು ಕಾಲದ ಸಂಸ್ಕೃತಿಯನ್ನೂ ಸೂಚಿಸಿಬಹುದು. ಮಹಾಭಾರತದಲ್ಲಿ ಉಲ್ಲೇಖಿತನಾಗಿರುವ ಸುಬಲನೂ ಕೂಡ ಅಂತಹವನೇ. ಆತನ ಮಗನಾದ ಶಕುನಿಯು ತಂದೆಯ ಮೂಳೆಯಿಂದ ದಾಳಗಳನ್ನು ತಯಾರಿಸಿಕೊಂಡು ಪಗಡೆಯಾಟದಲ್ಲಿ ಅಪ್ರತಿಮ ಆಟಗಾರನಾದ. ಆದ್ದರಿಂದ ನಾರಾಯಣ ಕವಚವನ್ನು ಅನುಷ್ಠಾನ ಮಾಡುತ್ತಿದ್ದ ಕೌಶಿಕನೂ ಕೂಡ ಅಂತಹ ವಿಶೇಷ ಶಕ್ತಿಯುಳ್ಳವನೇ ಆಗಿದ್ದ. ಆತನು ಮನೆಯನ್ನು ಬಿಟ್ಟು ಕಾಡಿನಲ್ಲಿ ಆ ಕವಚವನ್ನು ಅನುಷ್ಠಾನ ಮಾಡಿ ಸ್ವ-ಇಚ್ಛೆಯಿಂದ ಕಾಯವನ್ನು ತೊರೆದವನಾದುದರಿಂದ ಆತನ ಅಸ್ಥಿಗಳು ಭೂಮಿಯ ಮೇಲೆಯೇ ಬಿದ್ದಿದ್ದವು. ಆದ್ದರಿಂದಲೇ ಚಿತ್ರರಥನ ವಿಮಾನದ ಪತನಕ್ಕೆ ಕಾರಣವಾದುವು.

ಕವಚಗಳಲ್ಲಿ ಕರಣ ಮತ್ತು ಮಂತ್ರಗಳೆಂದು ಎರಡು ಭಾಗಗಳು. ಕರಣಗಳು ಯೋಧನ ಶರೀರವನ್ನು ರಕ್ಷಿಸಿದರೆ ಮಂತ್ರವು ಆ ದೇಹದಲ್ಲಿಯ ಜೀವನನ್ನು ಕಾಪಾಡುತ್ತದೆ. ವಿಶ್ವರೂಪಾಚಾರ್ಯರು ಇಂದ್ರನಿಗೆ ಉಪದೇಶಿಸಿದ್ದು ಮಂತ್ರ ಸಹಿತವಾದ ಕರಣ. ಇಂದು ನಮಗೆ ಆ ಕಾಲದ ಕರಣವು ಕೇವಲ ನಾಮಮಾತ್ರವಾಗಿ ಉಳಿದುಕೊಂಡು ಕೇವಲ ಮಂತ್ರವೇ ಉಳಿದಿದೆ. ಯಂತ್ರರೂಪವಾದ ಕವಚವು ಶರೀರವನ್ನು ಶತ್ರುಗಳ ಆಯುಧಗಳಿಂದ ಯಾವ ವಿಧವಾಗಿ ರಕ್ಷಿಸುತ್ತದೆಯೋ ಮಂತ್ರವು ಮನಸ್ಸನ್ನು ಶತ್ರುಗಳ ಪ್ರಯೋಗಗಳಿಂದ ಅದೇ ಬಗೆಯಾಗಿ ರಕ್ಷಿಸುತ್ತದೆ. ಮೈ-ಮನಸ್ಸುಗಳೆರಡೂ ಯಾವುದೇ ಪೆಟ್ಟನ್ನು ಅನುಭವಿಸದೆಯೇ ಉಳಿದುಕೊಂಡಿದ್ದಾಗ ಮಾತ್ರವೇ ವ್ಯಕ್ತಿಯಾದವನು ಕಾರ್ಯರಂಗದಲ್ಲಿ ಉತ್ಸಾಹದಿಂದ ಇರಬಲ್ಲ. ಆದ್ದರಿಂದ ಆತ್ಮರಕ್ಷಣೆಯನ್ನು ಕೋರುವವರು ಈ ಮಂತ್ರ ಮತ್ತು ಕವಚಗಳನ್ನು ಅನುಷ್ಠಾನದಲ್ಲಿ ಇಡಬೇಕೆಂದು ಹೇಳಿದ್ದಾರೆ.

ಕವಚಾನುಷ್ಠಾನದ ಸಂದರ್ಭದಲ್ಲಿ ಮನುಷ್ಯನಾದವನು ಅತ್ಯಂತ ಪರಿಶುದ್ಧನಾಗಿರಬೇಕು. ತನ್ನ ದೇಹದಲ್ಲಿರುವ ಶಕ್ತಿಗಳನ್ನು ಉದ್ದೀಪನಗೊಳಿಸಿ ಕೊಂಡಿರಬೇಕು. ಪಾದಗಳು, ಮೊಣಕಾಲುಗಳು, ತೊಡೆಗಳು ಹೊಟ್ಟೆ - ವಕ್ಷ - ಎದೆ - ಮುಖ - ಕಣ್ಣುಗಳು - ಭ್ರೂಮಧ್ಯೆ - ತಲೆ - ಜುಟ್ಟು ಇವುಗಳನ್ನು ಸ್ಪರ್ಶಿಸಿ ಪ್ರೇರಿಸುವಂತೆ ಮಂತ್ರಮೂರ್ತಿಯಾಗುವವನು ತನ್ನ ದೇಹದಲ್ಲಿಯ ಶಕ್ತಿಸ್ಥಾನಗಳನ್ನು ಬೀಜಾಕ್ಷರಗಳನ್ನು ಉಚ್ಚರಿಸುತ್ತಾ ಆ ಸ್ಥಾನಗಳಲ್ಲಿ ಚಟುವಟಿಕೆ, ಶಕ್ತಿಗಳನ್ನು ತುಂಬಿ ಜಾಗೃತಗೊಳಿಸಬೇಕು. ಇದಕ್ಕೆ ***ಅಂಗನ್ಯಾಸ***ವೆಂದು ಹೆಸರು.

ಅಂಗನ್ಯಾಸಕ್ಕೆ ಮೊದಲು ತನ್ನ ಕೈಬೆರಳುಗಳನ್ನು ಪರಸ್ಪರ ಸ್ಪರ್ಶಿಸುತ್ತಾ ಪ್ರೇರೇಪಿಸಬೇಕು. ಇದಕ್ಕೆ ***ಕರನ್ಯಾಸ***ವೆಂದು ಹೆಸರು. ಈ ಕರನ್ಯಾಸ - ಅಂಗನ್ಯಾಸಗಳು ಇಲ್ಲದೆ ಯಾವ ಮಂತ್ರವನ್ನು ಜಪಿಸಿದರೂ ಅವು ಆತ್ಮಶಕ್ತಿಯನ್ನು ಉತ್ತೇಜಿಸಲಾರವು.

ಮನುಷ್ಯನಲ್ಲಿಯ ಶಕ್ತಿ ಕೈ ಮತ್ತು ಪಾದಗಳ ಮೂಲಕ ಹರಿದು ಹೊರಕ್ಕೆ ಕಾಣಿಸಿಕೊಳ್ಳುತ್ತದೆ. ಉತ್ತರ ಗರ್ಭದಿಂದ ಪರೀಕ್ಷಿತ್ತು ಮೃತ ಶಿಶುವಿನ ರೂಪದಲ್ಲಿ ಹುಟ್ಟಿದಾಗ ಶ್ರೀ ಕೃಷ್ಣನು ಆತನನ್ನು ತನ್ನ ಎಡಪಾದದಿಂದ ಒರೆಸಿ ಬದುಕಿಸಿದ. ನಮ್ಮ ಕಾಲದಲ್ಲಿ ಶ್ರೀರಾಮಕೃಷ್ಣ ಪರಮಹಂಸರು ವಿವೇಕಾನಂದರ ತಲೆಯ ಮೇಲೆ ಪಾದವನ್ನು ಇರಿಸಿ ಜ್ಞಾನೋದಯವನ್ನುಂಟು ಮಾಡಿದ್ದಾರೆ. ಶಂತನು ಮಹಾರಾಜನು ತನ್ನ ಕೈಗಳಿಂದ ಸ್ಪರ್ಶಿಸಿದವರು ನಿತ್ಯಯೌವನ ಸಂಪನ್ನರಾಗುತ್ತಿದ್ದರಂತೆ. ವಸಿಷ್ಠರ ಹಸ್ತದಲ್ಲಿ ಅಮೃತ ಶಕ್ತಿ ಇತ್ತಂತೆ. ಇಂದಿನ ಮನುಷ್ಯರಲ್ಲೂ ಕೂಡ ವಿಚಿತ್ರ ಶಕ್ತಿಗಳನ್ನು ಪಡೆದಿರುವವರು ಇದ್ದಾರೆ. ಕೈಗಳು ಮಾತ್ರವೇ ಅಲ್ಲದೆ ಕಣ್ಣುಗಳು, ಕಿವಿಗಳು, ನಾಲಿಗೆಗೆ ಕೂಡ ವಿಚಿತ್ರವಾದ ಶಕ್ತಿಗಳು ಇರುವವರು ಉಂಟು. ಆದ್ದರಿಂದ ಈ ಮಾನವ ದೇಹವೇ ವಿಚಿತ್ರವಾದ ಮತ್ತು ಅದ್ಭುತವಾದ ಶಕ್ತಿಗಳ ಕೇಂದ್ರ ವೆಂದು ಹೇಳಬಹುದು[೧೫].

ಮನುಷ್ಯರಲ್ಲಿ ಕೆಲವರದು ಎಕ್ಸ್‌ರೇ ಕಣ್ಣುಗಳಾಗಿದ್ದರೆ ಇನ್ನು ಕೆಲವರದು ದೃಷ್ಟಿಕಣ್ಣುಗಳು. ಕಣ್ಣೋಟದಿಂದಲೇ ನಡೆಯುತ್ತಿರುವ ಗಡಿಯಾರಗಳನ್ನು ನಿಲ್ಲಿಸಿದವರು, ಕಬ್ಬಿಣದ ಸರಳುಗಳನ್ನು ಬಗ್ಗಿಸಿರುವವರು, ಮನೆಯಲ್ಲಿರುವ ಪಾತ್ರೆಗಳನ್ನು ಆಕಾಶದಲ್ಲಿ ಕುಣಿಸಿದವರು ಇರುವಂತೆಯೇ, ಕೆಲವರು ಭೂಮಿಯ ಒಳಭಾಗದಲ್ಲಿರುವ ನೀರಿನ ಸಲೆಯನ್ನು ಗುರ್ತಿಸಿ ಹೇಳಬಲ್ಲರು, ಕಿವಿಗಳಿಂದ, ಕೈಗಳಿಂದ ಸ್ಪರ್ಶಿಸಿ ಕಣ್ಣಿಂದ ನೋಡದೆಯೇ ಬಣ್ಣವನ್ನು ನಿಖರವಾಗಿ ಹೇಳುವ ಶಕ್ತಿ ಪಡೆದಿರುವವರೂ ಉಂಟು. ಎಷ್ಟು ಸೂಕ್ಷ್ಮ ಧ್ವನಿಯನ್ನಾದರೂ ಕೇಳಬಲ್ಲವರೂ ಇದ್ದಾರೆ.

ನಮ್ಮ ಪುರಾಣಗಳಲ್ಲಿ ಶಿವನ ನೋಟಕ್ಕೆ ಮನ್ಮಥನು ಬೂದಿಯಾದ. ಪುಲಸ್ತ್ಯ ಬ್ರಹ್ಮನ ನೋಟದಿಂದಲೇ ತೃಣಬಿಂದುವಿನ ಮಗಳು ಗರ್ಭಧರಿಸಿದಳು. ಕೌಶಿಕನ ನೋಟದಿಂದಲೇ ಕ್ರೌಂಚ ಪಕ್ಷಿ ಸುಟ್ಟು ಹೋಯಿತು. ಕಪಿಲ ಮಹರ್ಷಿಯ ದೃಷ್ಟಿಯಿಂದ ಸಗರರು ಭಸ್ಮೀಭೂತರಾದರು. ಕೇವಲ ಕಾರ್ಯ - ಕಾರಣ ವಾದವನ್ನು ನಂಬಿರುವವರಿಗೆ ಮಾತ್ರವೇ ಈ ವಾಕ್ಯಗಳು ಅತಿಶಯೋಕ್ತಿಯಾಗಿ ಕಾಣಿಸುತ್ತವೆ. ಭಾರತೀಯರಿಗೆ ಈ ಮಾತುಗಳು ಹೊಸವಲ್ಲ. ಯೋಗಸಾಧನೆಯಿಂದ ಮನುಷ್ಯನಾದವನು ಸಾಧಿಸದೆ ಇರುವ ಶಕ್ತಿಯೇ ಯಾವುದೂ ಇಲ್ಲ ಎಂಬುದನ್ನು ಭಾರತೀಯರು ನಂಬುತ್ತಾರೆ.

ಇಂದಿನ ಕಂಪ್ಯೂಟರ್ ಯುಗದಲ್ಲೂ ಕಂಪ್ಯೂಟರಿಗಿಂತಲೂ ವೇಗವಾಗಿ ಲೆಕ್ಕಗಳನ್ನು ಮಾಡುವವರನ್ನು, ಸೈನೆಡ್ ತಿಂದು, ಸಲ್ಫೂರಿಕ್ ಆಸಿಡ್ ಕುಡಿದು ಜೀವಂತವಾಗಿರು ವವರನ್ನು ನಾವು ನೋಡಿದ್ದೇವೆ. ನೀರಿನ ಮೇಲೆ, ಬೆಂಕಿಯ ಕೆಂಡಗಳ ಮೇಲೆ ನಡೆಯುವವರನ್ನು, ನೀರನ್ನು, ಕೆಂಡಗಳನ್ನು ಮಂತ್ರ ಪಠಣದಿಂದಲೇ ಸೃಷ್ಟಿಸಿದವರನ್ನು, ಗಾಳಿಯಲ್ಲಿ ತೇಲಾಡುವವರನ್ನು, ವಕ್ಷದ ಮೇಲೆ ರೋಡ್ ರೋಲರನ್ನು, ಆನೆಯನ್ನು ಹತ್ತಿಸಿಕೊಂಡು ಜೀವಂತವಾಗಿರುವವರನ್ನು, ಚಲಿಸುತ್ತಿರುವ ಮೋಟರ್ ವಾಹಗಳನ್ನು,

---

೧೫. ದೇಹವನ್ನು ರಕ್ಷಿಸುವ ದೇವತೆಗಳ ವಿವರಗಳು -

| ಕ್ರಮ | ಶರೀರದ ಭಾಗಗಳು | ದೇವತೆ | ಕ್ರಮ | ಶರೀರದ ಪರಿಸರ | ದೇವತೆ |
|---|---|---|---|---|---|
| ೧ | ಪಾದಗಳು | ಅಜ | ೧ | ಮುಂಭಾಗ | ಚಕ್ರಿ |
| ೨ | ಜಾನುಗಳು | ಅನಿಲ | ೨ | ಹಿಂಭಾಗ | ಗದಾಧಾರಿಯಾದ ಹರಿ |
| ೩ | ತೊಡೆಗಳು | ಯಜ್ಞ | ೩ | ಪಾರ್ಶ್ವಗಳು | ಧನುರ್ಧಾರಿಯಾದ ಮಧುಸೂದನ |
| ೪ | ಕಟಿತಟ | ಅಚ್ಯುತ | ೪ | ಕೋಣಗಳು | ಶಂಕಚಕ್ರಗದಾಧಾರಿ ಯಾದ ಉರುಕಾಯ |
| ೫ | ಹೊಟ್ಟೆ | ಹಯಾಸ್ಯ | ೫ | ಮೇಲ್ಭಾಗ | ಉಪೇಂದ್ರ |
| ೬ | ಹೃದಯ | ಕೇಶವ | ೬ | ತಳಭಾಗ | ತಾರ್ಕ್ಷ್ಯ |
| ೭ | ಕಂಠ | ಇನ | ೭ | ಪೂರ್ಣದೇಹ | ಹಲಧರ |
| ೮ | ಭುಜಗಳು | ಚತುರ್ಭುಜಮೂರ್ತಿ | | | |
| ೯ | ಮುಖ | ತ್ರಿವಿಕ್ರಮ | | | |
| ೧೦ | ಶರೀರ | ಈಶ್ವರ | | | |

ರೈಲು ಇಂಜನ್ನುಗಳನ್ನು ನಿಲ್ಲಿಸಿರುವವರು, ಮೈಯಲ್ಲೆಲ್ಲಾ ಶಸ್ತ್ರಗಳನ್ನು ಚುಚ್ಚಿಕೊಳ್ಳುವವರನ್ನು ಹೀಗೆ ಅನೇಕ ಬಗೆಯ ಅದ್ಭುತಗಳನ್ನು ಪ್ರದರ್ಶಿಸುವವರು ಇಂದೂ ಇದ್ದಾರೆ. ಅವರು ಯಾವ ರೀತಿಯಲ್ಲಿ ಇವನ್ನು ಮಾಡುವ ಸಾಮರ್ಥ್ಯವನ್ನು ಗಳಿಸಿಕೊಂಡಿದ್ದಾರೆ ಎಂಬುದು ಗೊತ್ತಾಗದೆ ವಿಜ್ಞಾನಿಗಳು ಗೊಂದಲಕ್ಕೆ ತುತ್ತಾಗಿರುವುದುಂಟು.

ಮನುಷ್ಯನ ಶರೀರವು ಒಂದು ಅದ್ಭುತವಾದ ಶಕ್ತಿಕೇಂದ್ರ. ಭಗವಂತನ ಲೀಲೆಗಳಿಗೆ ಇದೊಂದು ಟ್ರಾನ್ಸ್ ಮೀಟರ್. ಒಂದೊಂದು ದೇಹದಿಂದಲೂ ಒಂದೊಂದು ಬಗೆಯಾದ ಲೀಲೆಯನ್ನು ಪರಮಾತ್ಮನು ಹೊರ ಸೂಸುತ್ತಿರುತ್ತಾನೆ. ವ್ಯಕ್ತಿಯ ಶರೀರದಿಂದ ಹೊರ ಬಂದಂತೆಯೇ ಅದು ಇತರರ ಶರೀರವನ್ನು ಪ್ರವೇಶಿಸುವ ಶಕ್ತಿಯನ್ನೂ ಪಡೆದುಕೊಂಡಿರುತ್ತದೆ. ಶ್ರೀರಾಮನಿಗೆ ಬಾಣವನ್ನು ಕೊಡುತ್ತಿರುವಂತೆಯೇ ಪರಶುರಾಮ ನಲ್ಲಿಯ ಶಕ್ತಿಯು ನಿರ್ಗಮಿಸಿ ರಾಮನನ್ನು ಸೇರಿಕೊಂಡಿತು. ಹನುಮಂತನ ಬಾಲವನ್ನು ಸ್ಪರ್ಶಿಸುತ್ತಲೇ ಭೀಮನ ಬಲವು ಸೊನ್ನೆಯಾಯಿತು. ವಾಲಿಯು ತನ್ನ ನೋಟದಿಂದಲೇ ತನ್ನ ಪ್ರತಿಸ್ಪರ್ಧಿಯ ಶಕ್ತಿಯನ್ನೆಲ್ಲಾ ಸೆಳೆದು ಕೊಳ್ಳುತ್ತಿದ್ದನಂತೆ. ಪುರಾಣಗಳಲ್ಲಿಯ ಈ ವಿಶೇಷಗಳನ್ನೆಲ್ಲಾ ಕೇವಲ ಸುಳ್ಳೆಂದು ಸುಮ್ಮನೆ ಸಗಟಾಗಿ ಹೊಡೆದು ಹಾಕುವುದು ಸಾಧ್ಯವಾಗುವುದಿಲ್ಲ.

ಶರೀರದ ಈ ಶಕ್ತಿಯನ್ನು ಬಲ್ಲವರಾದುದರಿಂದಲೇ ಪೀಠಾಧಿಪತಿಗಳು, ತಪಸ್ವಿಗಳು ಮುಂತಾದವರು ನಮಸ್ಕರಿಸುವವರಿಗೆ ತಮ್ಮ ಪಾದಗಳನ್ನು ಸ್ಪರ್ಶಿಸಲು ಅವಕಾಶವನ್ನು ಕೊಡುವುದಿಲ್ಲ. ಭೂಮಿಗೆ ಆಕರ್ಷಣ ಶಕ್ತಿ ಇರುವುದರಿಂದ ಬರಿಯ ನೆಲದ ಮೇಲೆ ಅವರು ಕುಳಿತುಕೊಳ್ಳುವುದಿಲ್ಲ. ವ್ಯಕ್ತಿಗಳು ತಮ್ಮ ದೇಹದಲ್ಲಿರುವ ಶಕ್ತಿಗಳನ್ನು ಅರಿತು ಆಹಾರ ಸೇವನೆಯಿಂದ ಬಲವನ್ನು ಕಾಪಾಡಿಕೊಳ್ಳುವ ರೀತಿಯಲ್ಲಿಯೇ ಆಚರಣೆಯಲ್ಲಿ ಆತ್ಮಶಕ್ತಿಯನ್ನು ಕೂಡ ಕಾಪಾಡಿಕೊಳ್ಳಬೇಕಾದುದು ಅತ್ಯಾವಶ್ಯಕ. ಮಂತ್ರ, ಜಪ, ಉಪಾಸನಾ ಸಮಯದಲ್ಲಿ ಮಾಡುವ ಅಂಗನ್ಯಾಸ, ಕರನ್ಯಾಸಗಳು ಇದಕ್ಕೆ ಪೋಷಕವಾಗಿ ನಿಲ್ಲುತ್ತವೆ.

ಅಂಗನ್ಯಾಸ, ಕರನ್ಯಾಸಗಳಲ್ಲಿ ಆಯಾ ಮಂತ್ರಗಳಿಗೆ ನಿಯಮಿತವಾದ ಬೀಜಾಕ್ಷರಗಳ ಉಚ್ಚಾರಣೆಯು ಇರುತ್ತದೆ. ಅಕ್ಷರ ಜಗತ್ತಿಗೆ ಮೂಲವಾದದ್ದು ಓಂಕಾರ. ಓಂಕಾರವು ನಾದ ಬಿಂದು ಕಲಾತ್ಮಕವಾದುದು. ಜೀವನದಲ್ಲಿ ಧ್ವನಿಯು ಬಿಂದು ರೂಪದಲ್ಲಿ ಮೂಲಾಧಾರ ಚಕ್ರದಲ್ಲಿ ಇರುತ್ತದೆ. ಪ್ರಣವನಾದವು ಅಲ್ಲಿಂದಲೇ ಪ್ರಾರಂಭವಾಗುತ್ತದೆ. ಅದೇ ರೀತಿಯಾಗಿ ಇತರ ಅಕ್ಷರ ಧ್ವನಿಗಳು ಇತರ ಚಕ್ರಗಳ ಸ್ಥಾನಗಳಿಂದ ಹೊರ ಹೊಮ್ಮುತ್ತವೆ. ಆದ್ದರಿಂದ ಆಯಾ ಅಕ್ಷರಗಳನ್ನು ಉಚ್ಚರಿಸುವಾಗ ಆಯಾ ನಾದ ತಂತ್ರಗಳಲ್ಲಿ ಕಂಪನ ಉಂಟಾಗಿ ಅವು ಪ್ರೇರೇಪಿಸಲ್ಪಡುತ್ತವೆ.

ಮಂತ್ರವನ್ನು ಉಚ್ಚರಿಸುವಾಗ ಧ್ವನಿಯು ಸ್ಪಷ್ಟವಾಗಿ ನಿಯಮಿತ ಉದಾತ್ತಾದಿ ಸ್ವರಗಳು ಸ್ಪಷ್ಟವಾಗಿ ಇರುವಾಗಲೇ ಇವುಗಳಲ್ಲಿ ಉಂಟಾಗಬೇಕಾಗಿರುವ ಪ್ರೇರಣೆಯು ಯಶಸ್ವಿಯಾಗುತ್ತದೆ. ಇಲ್ಲದಿದ್ದರೆ ಇಲ್ಲ. ಸ್ಪಷ್ಟೋಚ್ಚಾರಣೆಗೆ ಮುಖಯಂತ್ರವೂ ಕೂಡ ಸಹಕರಿಸಬೇಕಾಗಿರುವುದು ತುಂಬಾ ಮುಖ್ಯ. ಮೊದ್ದು ನಾಲಿಗೆ, ಸಡಿಲವಾದ ದವಡೆಗಳು, ಕಟ್ಟಿರುವ ಮೂಗು ಇವು ನಾದ ಸ್ಪಷ್ಟತೆಯನ್ನು ಹಾಳು ಮಾಡುತ್ತವೆ. ಇವೇ ಅಲ್ಲದೆ ನಶ್ಯ, ಸಿಗರೇಟು ಸೇವನೆ, ತಾಂಬೂಲ ಚರ್ವಣ ಮುಂತಾದ ಅಭ್ಯಾಸಗಳು ಉಚ್ಚಾರಣೆಯ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತವೆ. ಆದ್ದರಿಂದ ಸ್ಪಷ್ಟ ಉಚ್ಚಾರಣೆಯನ್ನು ಬಯಸುವವರು ಈ ಮೊದಲು ಹೇಳಿರುವ ಚಟಗಳಿಂದ ದೂರವಾಗಿರುವುದು ಬಹು ಅವಶ್ಯಕ. ಮುಖ್ಯವಾಗಿ ಸಿದ್ಧಿಗಾಗಿ ಮಂತ್ರಗಳನ್ನು ಜಪಿಸುವವರು ಇದನ್ನು ಪ್ರಧಾನವಾಗಿ ಗಮನಿಸಬೇಕು. ಉಚ್ಚಾರಣೆಯಲ್ಲಿ ಎಲ್ಲಿ ದೋಷ ವಿದ್ದರೂ ಅದು ಅವರಿಗೆ ಕೇಡುಂಟು ಮಾಡುತ್ತದೆ ಎಂಬುದನ್ನು ಗ್ರಹಿಸಬೇಕು. ಇದಕ್ಕೆ ವೃತ್ರನ ವೃತ್ತಾಂತವನ್ನು ಉದಾಹರಣೆಯಾಗಿ ಹೇಳಬಹುದು. ತ್ವಷ್ಟವು ಪ್ರಜಾಪತಿ ಯಾಗಿದ್ದರೂ ಮಂತ್ರವನ್ನು ಉಚ್ಚರಿಸುವಾಗ ಅಚಾತುರ್ಯದಿಂದ ಉಂಟಾದ ಕೇವಲ ಒಂದು ಅಕ್ಷರದ ತಪ್ಪು ಉಚ್ಚಾರಣೆಯಿಂದ ಬಹು ದೊಡ್ಡ ದೋಷವೇ ಫಲವಾಗಿ ದೊರೆಯಿತು. ಇದನ್ನು ಎಲ್ಲಾ ಸಾಧಕರೂ ಚೆನ್ನಾಗಿ ನೆನಪಿನಲ್ಲಿರಿಸಿಕೊಳ್ಳಬೇಕು.

ಜಪಕಾಲದಲ್ಲಿ ಸಾಧಕನು ಪದ್ಮಾಸನದಲ್ಲಿ ಋಜುಕಾಯನಾಗಿ ಕುಳಿತುಕೊಳ್ಳಬೇಕು. ಇಲ್ಲದಿದ್ದರೆ ಸ್ವರತಂತುಗಳಲ್ಲಿ ಉಂಟಾಗಬೇಕಾಗಿರುವ ಪ್ರೇರಣೆಯು ದೊರೆಯುವುದಿಲ್ಲ. ನಮ್ಮ ಬೆನ್ನು ಮೂಳೆಯು ವೀಣೆಯಂತಹುದು. ಅದರ ಅಡಿಯಲ್ಲಿ ಇಡಾ - ಪಿಂಗಳಾ - ಸುಷುಮ್ನಾ ಎಂಬ ಮೂರು ಪ್ರಧಾನವಾದ ಯೋಗ ನಾಡಿಗಳು ಮುಪ್ಪುರಿಗೊಂಡಿರುತ್ತವೆ. ಸಂಗೀತದಲ್ಲಿ ವೀಣೆಯ ತಂತಿಗಳು ಇರಬೇಕಾಗಿರುವಷ್ಟು ಬಿಗಿಯಾಗಿ ಇಲ್ಲದಿದ್ದರೆ ಯಾವ ವಿಧವಾಗಿ ಅಪಶ್ರುತಿಯನ್ನು ನುಡಿಯುತ್ತದೆಯೋ ಮಂತ್ರ ಜಪ ಸಮಯದಲ್ಲೂ ದೇಹವು ಋಜುವಾಗಿ ಇಲ್ಲದಿದ್ದರೆ ಮಂತ್ರದಲ್ಲಿ ಅಪಸ್ವರ ಮೂಡುತ್ತದೆ. ಮನಸ್ಸಿನಲ್ಲಿ ಶಕ್ತಿ ಬೀಜಾಕ್ಷರದ ಉಚ್ಚಾರಣೆಯಿಂದ ಅಂತರಂಗದಿಂದ, ಅಂಗನ್ಯಾಸ ಕರನ್ಯಾಸಗಳಿಂದ ಹೊರಗಿನಿಂದ ಉದ್ಬುದ್ಧವಾಗುತ್ತದೆ. ಆದ್ದರಿಂದ ಎರಡೂ ಏಕಕಾಲದಲ್ಲಿ ಏಕಮುಖವಾಗಿ ಪ್ರೇರಣೆಯನ್ನು ಪಡೆದಾಗಲೇ ಸಾಧಕನಿಗೆ ಅದರ ಫಲವು ಸಿದ್ಧಿಯಾಗುತ್ತದೆ.

ಯೋಗಿಗಳಿಗೆ ಈ ಶಕ್ತಿಯು ನಿರಂತರ ಅಭ್ಯಾಸ, ನಿತ್ಯಸ್ಮರಣೆಗಳಿಂದ ಶಾಶ್ವತವಾಗಿ ಅವರ ದೇಹದಲ್ಲಿ ನಿಲ್ಲುತ್ತದೆ. ಶ್ರೀ ಕೃಷ್ಣನು ಯೋಗೀಶ್ವರನು. ಆದ್ದರಿಂದ ಶ್ರೀಕೃಷ್ಣನ ಮರಣದ ನಂತರ ಆ ಪಾರ್ಥಿವ ಶರೀರವು ಮೂರನೆಯ ದಿನ ಅರ್ಜುನನು ಹೋಗಿ ನೋಡುವವರೆವಿಗೂ ಸ್ವಲ್ಪವೂ ಕೆಡದಂತೆ ಅಂತೆಯೇ ಇತ್ತಂತೆ. ನಮ್ಮ ಕಾಲದಲ್ಲಿ ಯೋಗಿ ಅರವಿಂದರ ಶರೀರವು ಕೂಡ ಮೂರು ದಿನಗಳವರೆವಿಗೂ ಕುಂದದೆ, ಯಾವುದೇ ದೈಹಿಕ ವಿಕಾರಗಳಿಗೆ ಅವಕಾಶ ಕೊಡದಂತೆ ಇತ್ತು.

ಪೂರ್ವಕಾಲದಲ್ಲಿ ಮಂತ್ರ ಶಕ್ತಿಯಿಂದ ಸಾಧಿಸಲು ಅಸಾಧ್ಯ ಎಂಬ ಕಾರ್ಯವೇ ಇರಲಿಲ್ಲ. ಇಂದು ಮಂತ್ರಶಕ್ತಿಯ ಮೇಲೆ ನಂಬಿಕೆ ನಶಿಸಿದೆ. ಇಂದಿನವರ ನಂಬಿಕೆಯೆಲ್ಲಾ ಯಂತ್ರ ಶಕ್ತಿಯ ಮೇಲೆಯೇ. ಯಂತ್ರವು ಭೌತವಾದರೆ ಮಂತ್ರವು ಮಾನಸಿಕ ರೂಪದ್ದು. ಯಂತ್ರ ಶಕ್ತಿಯು ಹೊರಗೆ ಹುಟ್ಟಿ ಮಾನವನಿಗೆ ಪ್ರಯೋಜನಕಾರಿಯಾಗಿದ್ದರೆ ಮಂತ್ರ ಶಕ್ತಿಯು ಸಾಧಕನಲ್ಲಿಯೇ ಅವಿರ್ಭವಿಸಿ ಅವನಿಗೆ ಪ್ರಯೋಜನಕಾರಿಯಾಗುತ್ತದೆ. ಉದಾಹರಣೆಗೆ ಇಂದು ರೇಡಿಯೋ, ಟೀವಿಗಳಂತಹ ಸಾಧನೆಗಳು ಎಲ್ಲರಿಗೂ ದೊರೆ

ಯುತ್ತಿವೆ. ದೂರಶ್ರವಣ ಮತ್ತು ದೂರದರ್ಶನ ಪ್ರಕ್ರಿಯೆಗಳು ಪೂರ್ವಕಾಲದಲ್ಲಿ ಇರಲಿಲ್ಲ ಎಂದು ನಾವು ಖಚಿತವಾಗಿ ಹೇಳಲು ಸಾಧ್ಯವಾಗವುದಿಲ್ಲ. ಅವು ಕೇವಲ ಸಾಧಕರಿಗೆ ಮಾತ್ರವೇ ಪರಿಮಿತವಾಗಿದ್ದವು. ಪ್ರಯೋಗ ವಿಜ್ಞಾನದ ಸಾಧಕನಿಗೆ ತಾಳ್ಮೆಯು ಬಹು ಅವಶ್ಯಕವಾದುದು. ಇಲ್ಲದೆ ಹೋದರೆ ಏನೂ ಗೊತ್ತಿಲ್ಲದವನ ವಶದಲ್ಲಿರುವ ಯಂತ್ರವು ನಿರುಪಯೋಗಿಯಾಗಿರುವಂತೆಯೇ ಮಂತ್ರಶಕ್ತಿಯೂ ಕೂಡಾ ವ್ಯರ್ಥವಾಗುತ್ತದೆ.

ಮಂತ್ರ ಶಕ್ತಿಯು ಕೆಲಸ ಮಾಡಲು ಕಠಿಣವಾದ ನಿಯಮ - ನಿಷ್ಠೆಗಳು, ತಾಳ್ಮೆ - ಜಾಣ್ಮೆಗಳು ಅವಶ್ಯಕ. ದೀರ್ಘವಾದ ಸಾಧನೆಯ ಪಥವನ್ನು ಕ್ರಮಿಸುವುದು ಸಾಧ್ಯವಾಗದೆ ಇದ್ದರೆ ಮಂತ್ರವು ಫಲ ನೀಡದು. ಆಲಸಿಗಳು, ಮಂದಮತಿಗಳು, ಅತ್ಯಾಶಾಪರರು ಆದ ಮನುಷ್ಯರಿಗೆ ಮಂತ್ರ ಶಕ್ತಿಯು ಫಲವನ್ನು ಕೊಡುವುದಿಲ್ಲ. ಇಂದು ಮಂತ್ರ ಸಿದ್ಧರು ಅಪರೂಪವಾಗಲು ಇದೊಂದು ಮುಖ್ಯ ಕಾರಣ.

ಈ ಕವಚವನ್ನು ಅನುಷ್ಠಾನ ಮಾಡುವಂತಹವರು ಕೈ-ಕಾಲುಗಳನ್ನು ತೊಳೆದುಕೊಂಡು ಉತ್ತರಾಭಿಮುಖವಾಗಿ ಇಲ್ಲವೇ ಪೂರ್ವಾಭಿಮುಖವಾಗಿ ಕುಳಿತು ಅಷ್ಟಾಕ್ಷರಿ, ದ್ವಾದಶಾಕ್ಷರಿ, ಷಡಕ್ಷರಿ ಮಂತ್ರಗಳಲ್ಲಿ ಅಂಗನ್ಯಾಸ ಮಾಡಬೇಕು. ಆಗ ಸಾಧಕನು ಮಂತ್ರ ಮೂರ್ತಿಯಾಗಿ ನಾರಾಯಣ ಕವಚದ ಪಾರಾಯಣಕ್ಕೆ ಅರ್ಹನಾಗುತ್ತಾನೆ.

ಸಾಧಾರಣವಾಗಿ ಕವಚಗಳಿಗೆ ಒಂದೇ ಮಂತ್ರದಲ್ಲಿ ಅಂಗನ್ಯಾಸವಿರುತ್ತದೆ, ಆದರೆ ಇದಕ್ಕೆ ಮೂರು ಮಂತ್ರಗಳಲ್ಲಿ ಅಂಗನ್ಯಾಸ - ಕರನ್ಯಾಸಗಳು ಇವೆ. ಇದೇ ಇದರ ವೈಶಿಷ್ಟ್ಯ. ಅಂಗನ್ಯಾಸ - ಕರನ್ಯಾಸಗಳ ನಂತರ ಶ್ರೀ ಮಹಾವಿಷ್ಣುವನ್ನು ಧ್ಯಾನಿಸಿ ಕವಚ ಚಕ್ರವನ್ನು ಷೋಡಶೋಪಚಾರಗಳಿಂದ ಪೂಜಿಸಬೇಕು. ತರುವಾಯ ಅಷ್ಟಾಕ್ಷರಿ ಮಂತ್ರವನ್ನು ಜಪಿಸಬೇಕು. ಜಪಸಂಖ್ಯೆಯು ೧೦ಲಕ್ಕಿಂತಲೂ ಕಡಿಮೆಯಾಗಿ ಇರಬಾರದು. ಈ ಸಂಖ್ಯೆಯು ವಿಷ್ಣುವಿಗೆ ಪ್ರಿಯವಾದುದು. ಜಪಾವಸಾನದಲ್ಲಿ ಮತ್ತೆ ಧ್ಯಾನವನ್ನು ಮಾಡಿದ ನಂತರ ಕವಚ ಪಾರಾಯಣವನ್ನು ಮಾಡಬೇಕು ಇದು ನಿಯಮ.

ಈ ಕವಚದಲ್ಲಿ ಭೂಷಣಾಯುಧ ಲಿಂಗಾಖ್ಯಗಳೆಂಬ ಶಕ್ತಿಗಳನ್ನು ಧರಿಸಿ ಪರಮೇಶ್ವರನು ಉಪಾಸಿಸಲ್ಪಡುತ್ತಾನೆ. ವೈಷ್ಣವ ಮತವನ್ನು ಅನುಸರಿಸಿ ಶ್ರೀ ಮಹಾವಿಷ್ಣುವಿನ ಭೂಷಣಗಳು[೧೬], ಆಯುಧಗಳು[೧೭], ಲಿಂಗಗಳು[೧೮] ಎಂದರೆ ಚಿಹ್ನೆಗಳು ಶ್ರೀವತ್ಸ ಇತ್ಯಾದಿಗಳು ಆಳ್ವಾರುಗಳಾಗಿ ಅವತರಿಸಿ ಭೂಲೋಕದಲ್ಲಿ ವೈಷ್ಣವ ಮತವನ್ನು ವ್ಯಾಪಕಗೊಳಿಸಿದರು. ಆದ್ದರಿಂದ ಭಗವಂತನಿಗಿಂತಲೂ ಭಕ್ತನಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ವೈಷ್ಣವ ಮತದಲ್ಲಿ ಕೊಡಲಾಗುತ್ತದೆ. ಇಷ್ಟು ಮಾತ್ರವೇ ಅಲ್ಲದೆ ವಿಷ್ಣುವು ಅಲಂಕಾರ ಪ್ರಿಯ. ನಿರಾಯುಧನಾಗಿದ್ದಾಗ ಯಾವ ದೇವನೂ ಏನನ್ನೂ ಮಾಡಲಾರ. ಆದ್ದರಿಂದ ಕವಚಗಳಲ್ಲಿ ನಿರ್ಗುಣ ಬ್ರಹ್ಮನಲ್ಲದೆ ಸಗುಣಬ್ರಹ್ಮನು ಸಪರಿವಾರನಾಗಿ ಧ್ಯಾನಿಸಲ್ಪಡುತ್ತಾನೆ. ಅಂತಹ ಮೂರ್ತಿಯೇ ಐಹಿಕ ಫಲವನ್ನು ದಯಪಾಲಿಸಬಲ್ಲ. ಆದ್ದರಿಂದ ಶತ್ರು ವಿಜಯವನ್ನು ಬಯಸುವವರು ಅನುಷ್ಠಾನ ಮಾಡಬಹುದಾದ ಕವಚ ಇದು. ಇದರಿಂದ ಬಾಹ್ಯ ಶತ್ರುಗಳು ಮಾತ್ರವಲ್ಲ ಅಂತಶ್ಶತ್ರುಗಳು, ವ್ಯಾಧಿಗಳೂ ಕೂಡ ನಿರ್ಮೂಲವಾಗುತ್ತವೆ.

ಭಾಗವತದಲ್ಲಿ ಈ ಕವಚದ ಸ್ವರೂಪ, ಅಂಗನ್ಯಾಸ, ಕರನ್ಯಾಸ ಎಲ್ಲವನ್ನೂ ಶ್ಲೋಕ ರೂಪದಲ್ಲಿ ಹೇಳಿದೆ[೧೯]. ಆದ್ದರಿಂದ ಸಾಧಕರಿಗೆ, ಓದುಗರ ಪ್ರಯೋಜನಕ್ಕಾಗಿ ಕವಚವನ್ನೂ ಕೂಡ ಯಂತ್ರ ಸಮೇತವಾಗಿ ಕೊಡಲಾಗಿದೆ. ಈ ಯಂತ್ರವನ್ನು ಚಿನ್ನ, ಬೆಳ್ಳಿ, ತಾಮ್ರ ಅಥವಾ ಪಂಚಲೋಹದಲ್ಲಿ ಮಾಡಿಸಿ ಪೂಜಿಸಿದರೆ ಇಷ್ಟಾರ್ಥ ಸಿದ್ಧಿಯಾಗುತ್ತದೆ.




೧೬. ವಿಷ್ಣು ಮೂರ್ತಿಯ **ಭೂಷಣಗಳು** -
(೧) ಕೌಸ್ತುಭ - ಕುಲಶೇಖರ ಆಳ್ವಾರು (೨) ವೈಜಯಂತಿ - ತೊಂಡರಡಿಪ್ಪೊಡಿ ಯಾಳ್ವಾರು

೧೭. ವಿಷ್ಣುವಿನ **ಆಯುಧಗಳು** -
(೧) ಸುದರ್ಶನ - ಭಕ್ತಿಸಾರಮುನಿ (೨) ಪಾಂಚಜನ್ಯ - ಸರೋಯೋಗಿ (೩) ಕೌಮೋದಕಿ - ಪೂದತ್ತ ಆಳ್ವಾರು (೪) ನಂದಕ - ಪೆರಿಯಾಳ್ವಾರು (೫) ಶಾರ್ಙ್ಗಂ - ಪರಕಾಲ ಮುನಿ

೧೮. ವಿಷ್ಣುವಿನ **ಲಿಂಗಗಳು (ಚಿಹ್ನೆಗಳು)** - (೧) ಶ್ರೀವತ್ಸ - ತಿರುಪ್ಪಾಣಾಳ್ವಾರ
ವಿಷ್ಣುವಿನ **ದಾಸರು** - (೧) ಶೇಷ - ಕೂರತ್ತಾಳ್ವಾರು (೨) ಗರುತ್ಮಂತ - ವಿಷ್ಣುಚಿತ್ತ

೧೯ ಧೌತಾಂಘ್ರಿ ಪಾಣಿರಾಚಮ್ಯ ಸಪವಿತ್ರ ಉದಙ್ಮುಖಃ ।
ಕೃತ್ವಾಂಗ ಕರನ್ಯಾಸೋ ಮಂತ್ರಾಭ್ಯಾಂ ವಾಗ್ಯತಃ ಶುಚಿಃ ।
ನಾರಾಯಣಮಯಂ ವರ್ಮ ಸನ್ನಹ್ಯೇದ್ ಭಯ ಆಗತೇ।

## ಶ್ರೀ ನಾರಾಯನ ಕವಚ ಪೂಜಾಯಂತ್ರ

**ನಾರಾಯಣ ಕವಚ**

ಓಂ ಅಸ್ಯಶ್ರೀ ನಾರಾಯಣ ಕವಚ ಮಹಾಮಂತ್ರಸ್ಯ, ವಾಮದೇವ ಋಷಿಃ ಗಾಯತ್ರೀ ಛಂದಃ ಶ್ರೀಮನ್ನಾರಾಯಣೋ ದೇವತ ಓಂ ಬೀಜಂ, ನಮೋ ಶಕ್ತಿಃ ನಾರಾಯಣಾಯೇತಿ ಕೀಲಕಂ, ಶ್ರೀಮನ್ನಾರಾಯಣ ಪ್ರಸಾದ ಸಿದ್ಧ್ಯರ್ಥೇ ಜಪೇ ವಿನಿಯೋಗ ಃ

### ಅಷ್ಟಾಕ್ಷರಿ

**ಕರನ್ಯಾಸ**

೧. ಓಂ ಅಂಗುಷ್ಠಾಭ್ಯಾಂ ನಮಃ ೨. ನಮೋ ತರ್ಜನೀಭ್ಯಾಂ ನಮಃ ೩. ನಾಂ ಮಧ್ಯಮಾಭ್ಯಾಂ ನಮಃ ೪. ರಾಂ ಅನಾಮಿಕಾಭ್ಯಾಂ ನಮಃ ೫. ಯಣಾಂ ಕನಿಷ್ಠಿಕಾಭ್ಯಾಂ ನಮಃ ೬. ಯಃ ಕರತಲಕರ ಪೃಷ್ಠಾಭ್ಯಾಂ ನಮಃ

**ಅಂಗನ್ಯಾಸಂ**

ಓಂ ಪಾದಾಯ ನಮಃ ನಂ ಜಾನುವೇ ನಮಃ ಮೋಂ ಊರುವೇ ನಮಃ
ನಾಂ ಉದರಾಯ ನಮಃ ರಾಂ ಹೃದಯಾಯ ನಮಃ ಯಂ ಉರಾಯ ನಮಃ
ಣಾಂ ಮುಖಾಯ ನಮಃ ಯಂ ಶಿರಸೇ ಸ್ವಾಹಾ

### ದ್ವಾದಶಾಕ್ಷರಿ

**ಕರನ್ಯಾಸಂ**

ಓಂ ಅಂಗುಷ್ಟಾಭ್ಯಾಂ ನಮಃ ನಮೋ ತರ್ಜನೀಭ್ಯಾಂ ನಮಃ ಭಗವತೇ ಮಧ್ಯಮಾಭ್ಯಾಂ ನಮಃ
**ವಾಸುದೇವಾಯ** ಅನಾಮಿಕಾಭ್ಯಾಂ ನಮಃ ಓಂ ನಮೋ ಭಗವತೇ ಕನಿಷ್ಠಿಕಾಭ್ಯಾಂ ನಮಃ
**ವಾಸುದೇವಾಯ** ಕರತಲ ಕರಪೃಷ್ಠಾಭ್ಯಾಂ ನಮಃ

ಪಾದಯೋರ್ಜಾನುನೋರುರ್ವೋರುದರೇ ಹೃದ್ಯಥೋರಸಿ॥
ಮುಖೇ ಶಿರಸ್ಯಾನು ಪೂರ್ವ್ಯಾದೋಕಾಂರಾದೀನಿ ವಿನ್ಯಸೇತ್।
ಓಂ ನಮೋ ನಾರಾಯಣಾಯೇತಿ ವಿಪರ್ಯಯ ಮಥಾಪಿ ವಾ॥
ಕರನ್ಯಾಸಂ ತತಃ ಕುರ್ಯಾದ್ ದ್ವಾದಶಾಕ್ಷರವಿದ್ಯಯಾ।
ಪ್ರಣವಾದಿಯಕಾರಾಂತ ಮಂಗುಲ್ಯಂಗುಷ್ಠಪರ್ವಸು॥
ನ್ಯಸೇದ್ಧೃದಯ ಓಂಕಾರಂ ವಿಕಾರಮನು ಮೂರ್ಧನಿ।
ಷಕಾರಂ ತು ಭ್ರುವೋರ್ಮಧ್ಯೇ ಣಕಾರಂ ಶಿಖಾಯಾದಿಶೇತ್॥
ವೇಕಾರಂ ನೇತ್ರಯೋರ್ಯುಂಜ್ಯಾನ್ನಕಾರಂ ಸರ್ವಸಂಧಿಷು।
ಮಕಾರ ಮಸ್ತ್ರ ಮುದ್ದಿಶ್ಯ ಮಂತ್ರಮೂರ್ತಿರ್ಭವೇದ್ ಬುಧಃ॥
ಸವಿಸರ್ಗಂ ಷಡತಂ ತತ್ ಸರ್ವದಿಕ್ಷು ವಿನಿರ್ದಿಶೇತ್।
ಓಂ ವಿಷ್ಣವೇ ನಮ ಇತಿ॥
ಆತ್ಮಾನಂ ಪರಮಂ ಧ್ಯಾಯೇದ್ ಷಟ್‌ಶಕ್ತಿಭಿರ್ಯುತಮ್।
ವಿದ್ಯಾತೇಜಸ್ತಪೋಮೂರ್ತಿಮಿಮಂ ಮಂತ್ರಮುದಾಹರೇತ್॥

- ಶ್ರೀಮದ್ಭಾಗವತಂ, ಸ್ಕಂದ ೬ : ಅಧ್ಯಾಯ ೮ : ೪-೧೧

**ಅಂಗನ್ಯಾಸಂ**

ಓಂ ಮೂರ್ಧ್ನಾಯ ನಮಃ ನಂ ಮುಖಾಯ ನಮಃ ಮೋಂ ಉದರಾಯ ನಮಃ
ಭಂ ಹೃದಯಾಯ ನಮಃ ಗಂ ಉರಾಯ ನಮಃ ಏಂ ಕಟ್ಯೈ ನಮಃ
ತೇಂ ವಸ್ತಯೇ ನಮಃ ವಾಂ ಗುಹ್ಯಾಯ ನಮಃ ಸುಂ ಊರುವೇ ನಮಃ
ದೇಂ ಜಾನುವೇ ನಮಃ ವಾಂ ಜಂಘಾಯ ನಮಃ ಯಂ ಪಾದಾಯ ನಮಃ

### ಷಡಕ್ಷರಿ

**ಕರನ್ಯಾಸಂ**

ಓಂ ಅಂಗುಷ್ಠಾಭ್ಯಾಂ ನಮಃ ವಿಂ ತರ್ಜನೀಭ್ಯಾಂ ನಮಃ ಷಂ ಮಧ್ಯಮಾಭ್ಯಾ ನಮಃ
ಣಂ ಅನಾಮಿಕಾಭ್ಯಾಂ ನಮಃ ವೇಂ ಕನಿಷ್ಠಿಕಾಭ್ಯಾಂ ನಮಃ ನಮಃ ಕರತಲಕರ ಪೃಷ್ಠಾಭ್ಯಾಂ ನಮಃ

**ಅಂಗನ್ಯಾಸಂ**

ಓಂ ಹೃದಯಾಯ ನಮಃ ವಿಂ ಮೂರ್ಧ್ನಾಯ ನಮಃ ಷಂ ಭ್ರೂಮಧ್ಯಾಯ ನಮಃ
ಣಂ ಶಿಖಾಯ ವಷಟ್ ವೇಂ ನೇತ್ರ ತ್ರಯಾಯ ನಮಃ ನಮಃ ಅಸ್ತ್ರಾಯ ಫಟ್
ಓಂ ವಿಷ್ಣವೇ ನಮಃ ಇತಿದಿಗ್ಬಂಧನಂ

*ಧ್ಯಾನಂ -* *ಶಾಂತಾಕಾರಂ ಭುಜಗ ಶಯನಂ ಪದ್ಮನಾಭಂ ಸುರೇಶಮ್*
*ವಿಶ್ವಾಕಾರಂ ಗಗನ ಸದೃಶಂ ಮೇಘವರ್ಣಂ ಶುಭಾಂಗಮ್ ।*
*ಲಕ್ಷ್ಮೀಕಾಂತಂ ಕಮಲ ನಯನಂ ಯೋಗಿ ಹೃದ್ಧ್ಯಾನ ಗಮ್ಯಮ್*
*ವಂದೇಂ ವಿಷ್ಣುಂ ಭವಭಯಹರಂ ಸರ್ವ ಲೋಕೈಕ ನಾಥಮ್ ॥*

### ಪಂಚಭೂತ ಪೂಜಾ ವಿಧಾನಂ

ಲಂ *ಪೃಥಿವ್ಯಾತ್ಮನೇ* ನಾರಾಯಣಾಯ *ಗಂಧಂ* ಸಮರ್ಪಯಾಮಿ
ಹಂ *ಆಕಾಶಾತ್ಮನೇ* ನಾರಾಯಣಾಯ *ಪುಷ್ಪಂ* ಸಮರ್ಪಯಾಮಿ
ಯಂ *ವಾಯುರಾತ್ಮನೇ* ನಾರಾಯಣಾಯ *ಧೂಪಂ* ಆಘ್ರಾಪಯಾಮಿ
ರಂ *ತೇಜಸಾತ್ಮನೇ* ನಾರಾಯಣಾಯ *ದೀಪಂ* ದರ್ಶಯಾಮಿ
ವಂ *ಅಮೃತಾತ್ಮನೇ* ನಾರಾಯಣಾಯ *ಅಮೃತ ನೈವೇದ್ಯಂ* ಸಮರ್ಪಯಾಮಿ
ಸಂ *ಸರ್ವಾತ್ಮನೇ* ನಾರಾಯಣಾಯ *ಪೂಜಾನ್* ಸಮರ್ಪಯಾಮಿ

### ಷೋಡಶೋಪಚಾರ ಪೂಜಾ

*ಆಹ್ವಾನಂ ಚಾಸನಾರ್ಘ್ಯಂ ಪದ ಸಲಿಲಮಥಾ ಚಾಮ ಪುಂ ಸೂಕ್ತಯುಕ್ತ*
*ಸ್ನಾನಂ ವಸ್ತ್ರೋಪವೀತೇ ಮಲಯಜ ಕುಸುಮೌ ಧೂಪದೀಪ ಕ್ರಮೇಣ*
*ಮಧ್ವಾದಿಃ ಸರ್ವ ಆದಾಮುಪರಿ ಚ ಸಲಿಲಂ ಪಾಯಸಾದ್ಯನ್ನ ಜಾತಮ್*
*ಪಾನೀಯಾಚಪು ಪೂಗಂ ಪರಿಗತಿ ನಮಥೋದ್ವಾಸನಂ ದೇವಪೂಜಾ ॥*

ಆವಾಹನ - ಆಸನ - ಅರ್ಘ್ಯ - ಪಾದ್ಯ - ಆಚಮನ - ಮಧುಪರ್ಕ - ಸ್ನಾನ - ವಸ್ತ್ರ - ಯಜ್ಞೋಪವೀತ - ಗಂಧ - ಪುಷ್ಪ - ದೀಪ - ಪೂರ್ವಾಪೋಶನ - ನೈವೇದ್ಯ - ಪಾನೀಯ - ಉತ್ತರಾಪೋಶನ - ತಾಂಬೂಲ - ಪ್ರದಕ್ಷಿಣ - ನಮಸ್ಕಾರ - ಉದ್ವಾಸನ ಇವಿಷ್ಟು ಪೂರ್ಣ ಪೂಜೆ. ಭಕ್ತರು ತಮ್ಮ ಸಮಯ ಅವಕಾಶಗಳನ್ನು ಅನುಸರಿಸಿ ಕವಚ ಚಕ್ರವನ್ನು ಹೀಗೆ ಸಂಪೂರ್ಣವಾಗಿಯೂ ಪೂಜಿಸಬಹುದು. ಅಧಿಕಸ್ಯ ಅಧಿಕ ಫಲಂ. ಅವರವರ ಭಕ್ತಿ - ಶ್ರದ್ಧೆಗಳಿಗೆ ಅನುಗುಣವಾಗಿ ಫಲವು ಲಭಿಸುತ್ತದೆ.

ಈ ಪೂಜೆಯ ನಂತರ ಓಂ ನಮೋ ನಾರಾಯಣಾಯ ಎಂಬ ಮೂಲ ಮಂತ್ರವನ್ನು ೧೦೮ ಬಾರಿ ಜಪಿಸಬೇಕು. ಜಪದ ನಂತರ ಮತ್ತೆ ಧ್ಯಾನವನ್ನು ಮಾಡಬೇಕು.

*ಧ್ಯಾನಂ - ಶಾಂತಕಾರಂ ಭುಜಗಶಯನಂ... ಸರ್ವಲೋಕೈಕ ನಾಥಂ॥*

*ಶ್ಲೋ ॥ ಕೂರ್ಮಾದೀನಾಂ ದಿವ್ಯಲೋಕಂ ತದನು ಮಣಿಮಯಂ ಮಂಟಪಂ ತತ್ರಶೇಷಮ್*
*ತಸ್ಮಿನ್ ಧರ್ಮಾಧಿಪೀಠಂ ತದುಪರಿ ಕಮಲಂ ಚಾಮರ ಗ್ರಾಹಿಣೀಶ್ಚ ।*
*ವಿಷ್ಣುಂ ದೇವೀ ವಿಭೂಷಣಾಯುಧ ಗಣಮುದಗಂ ಪಾದುಕೇ ವೈನತೇಯಮ್*
*ಸೇನೇಶಂ ದ್ವಾರಪಾಲಾನ್ ಕುಮುದ ಮುಖಗಣಾನ್ ವಿಷ್ಣುಭಕ್ತಾನ್ ಪ್ರಪದ್ಯೇ ॥*

ನಂತರ ನಮಸ್ಕರಿಸಿ - ಶ್ರೀ ಮಹಾವಿಷ್ಣುಂ ಉದ್ವಾಸಯಾಮಿ, ಯಥಾ ಸ್ಥಾನಂ ಸ್ಥಾಪಯಾಮಿ, ಶೋಭನಾರ್ಥೇ ಪುನರಾಗಮನಾಯ ಚ ಎಂದು ಹೇಳುತ್ತಾ ಪೂಜಾಚಕ್ರವನ್ನು ಯಥಾಸ್ಥಾನದಲ್ಲಿ ಇರಿಸಬೇಕು ಅಥವಾ ಕದಲಿಸಬೇಕು.

ನಂತರ ಈ ಕವಚವನ್ನು ಪಠಿಸಬೇಕು:-

*ಓಂ ಹರಿರ್ವಿದಧ್ಯಾನ್ಮಮ ಸರ್ವರಕ್ಷಾಂ ನ್ಯಸ್ತಾಂಘ್ರಿ ಪದ್ಮಃ ಪತಗೇಂದ್ರ ಪೃಷ್ಠೇ*
*ದರಾರಿ ಚರ್ಮಾಸಿಗದೇಷು ಚಾಪ ಪಾಶಾನ್ ದಧಾನೋಽಷ್ಟಗುಣೋಽಷ್ಟ ಬಾಹುಃ॥*
*ಜಲೇಷು ಮಾಂ ರಕ್ಷತು ಮತ್ಸ್ಯಮೂರ್ತಿರ್ಯಾದೋಗಣೇಭ್ಯೋ ವರುಣಸ್ಯ ಪಾಶಾತ್*
*ಸ್ಥಲೇಷು ಮಾಯಾವಟುವಾಮನೋಽವ್ಯಾತ್ ತ್ರಿವಿಕ್ರಮಃ ಖೇಽವತು ವಿಶ್ವರೂಪಃ॥*
*ದುರ್ಗೇಷ್ವಟವ್ಯಾಜಿ ಮುಖಾದಿಷು ಪ್ರಭುಃ ಪಾಯಾನ್ನೃಸಿಂಹೋಽಸುರಯೂಥಪಾರಿಃ*
*ವಿಮುಂಚತೋ ಯಸ್ಯ ಮಹಾಟ್ಟಹಾಸಂ ದಿಶೋ ವಿನೇದುರ್ನ್ಯಪತಂಶ್ಚ ಗರ್ಭಾಃ॥*
*ರಕ್ಷತ್ವಸೌ ಮಾಧ್ವನಿ ಯಜ್ಞಕಲ್ಪಃ ಸ್ವದಂಷ್ಟ್ರಯೋನ್ನೀತಧರೋ ವರಾಹಃ*
*ರಾಮೋಽದ್ರಿಕೂಟೇಷ್ವಥ ವಿಪ್ರವಾಸೇ ಸಲಕ್ಷ್ಮಣೋಽವ್ಯಾದ್ ಭರತಾಗ್ರಜೋಽಸ್ಮಾನ್॥*
*ಮಾಮುಗ್ರಧರ್ಮಾದಖಿಲಾತ್ ಪ್ರಮಾದಾನ್ನಾರಾಯಣಃ ಪಾತು ನರಶ್ಚ ಹಾಸಾತ್*
*ದತ್ತ ಸ್ತ್ವಯೋಗಾದಥ ಯೋಗನಾಥಃ ಪಾಯಾದ್ ಗುಣೇಶಃ ಕಪಿಲಃ ಕರ್ಮಬಂಧಾತ್॥*
*ಸನತ್ಕುಮಾರೋಽವತು ಕಾಮದೇವಾದ್ಧಯ ಶೀರ್ಷಾ ಮಾಂ ಪಥಿ ದೇವಹೇಲನಾತ್*
*ದೇವರ್ಷಿವರ್ಯಃ ಪುರುಷಾರ್ಚನಾಂತರಾತ್ ಕೂರ್ಮೋ ಹರಿರ್ಮಾ ನಿರಾಯಾದಶೇಷಾತ್॥*
*ಧನ್ವಂತರಿರ್ಭಗವಾನ್ ಪಾತ್ವಪಥ್ಯಾದ್ ದ್ವಂದ್ವಾದ್ ಭಯಾದೃಷಭೋ ನಿರ್ಜಿತಾತ್ಮಾ*
*ಯಜ್ಞಶ್ಚ ಲೋಕಾದವತಾಜ್ಜನಾಂತಾದ್ ಬಲೋ ಗಣಾತ್ ಕ್ರೋಧವಶಾದಹೀಂದ್ರಃ॥*
*ದ್ವೈಪಾಯನೋ ಭಗವಾನ ಪ್ರಬೋಧಾದ್ ಬುದ್ಧಸ್ತು ಪಾಖಂಡಗಣಾತ್ ಪ್ರಮಾದಾತ್*
*ಕಲ್ಕಿಃ ಕಲೇಃ ಕಾಲಮಲಾ ತ್ಪ್ರಪಾತು ಧರ್ಮಾವನಾಯೋರುಕೃತಾವತಾರಃ॥*
*ಮಾಂ ಕೇಶವೋ ಗದಯಾ ಪ್ರಾತರವ್ಯಾದ್ ಗೋವಿಂದ ಆಸಂಗವಮಾತ್ತವೇಣುಃ*
*ನಾರಾಯಣಃ ಪ್ರಾಹ್ಣ ಉದಾತ್ತಶಕ್ತಿ ರ್ಮಧ್ಯಂದಿನೇ ವಿಷ್ಣುರರೀಂದ್ರಪಾಣಿಃ॥*
*ದೇವೋಽಪರಾಹ್ಣೇ ಮಧುಹೋಗ್ರಧನ್ವಾ ಸಾಯಂ ತ್ರಿಧಾಮಾವತು ಮಾಧವೋ ಮಾಮ್*
*ದೋಷೇ ಹೃಷೀಕೇಶ ಉತ್ತಾರ್ಧರಾತ್ರೇ ನಿಶೀಥ ಏಕೋಽವತು ಪದ್ಮನಾಭಃ॥*
*ಶ್ರೀವತ್ಸ ಧಾಮಾಪರರಾತ್ರ ಈಶಃ ಪ್ರತ್ಯೂಷ ಈಶೋಽಸಿಧರೋ ಜನಾರ್ದನಃ*
*ದಾಮೋದರೋಽವ್ಯಾದನು ಸಂಧ್ಯಂ ಪ್ರಭಾತೇ ವಿಶ್ವೇಶ್ವರೋ ಭಗವಾನ್ ಕಾಲಮೂರ್ತಿಃ॥*
*ಚಕ್ರಂ ಯುಗಾಂತಾನಲತಿಗ್ಮನೇಮಿ ಭ್ರಮತ್ ಸಮಂತಾದ್ ಭಗವತ್ಪ್ರಯುಕ್ತಮ್*
*ದಂದಗ್ಧಿ ದಂದಗ್ಧ್ಯರಿ ಸೈನ್ಯಮಾಶು ಕಕ್ಷಂ ಯಥಾ ವಾತಸಖೋ ಹುತಾಶಃ॥*
*ಗದೇಽಶನಿ ಸ್ಪರ್ಶನ ವಿಸ್ಫುಲಿಂಗೋ ವಿಷ್ಪಿಂಡಿ ನಿಷ್ಪಿಂಡ್ಯಜಿತ ಪ್ರಿಯಾಸಿ*
*ಕೂಷ್ಮಾಂಡ ವೈನಾಯಕಯಕ್ಷರಕ್ಷೋಭೂತಗ್ರಹಾಂ ಶ್ಚೂರ್ಣಯ ಚೂರ್ಣಯಾರೀನ್॥*
*ತ್ವಂ ಯಾತುಧಾನ ಪ್ರಮಥ ಪ್ರೇತಮಾತೃ ಪಿಶಾಚ ವಿಪ್ರಾಗ್ರಹ ಘೋರ ದೃಷ್ಟೀನ್*
*ದರೇಂದ್ರ ವಿದ್ರಾವಯ ಕೃಷ್ಣಪೂರಿತೋ ಭೀಮ ಸ್ವನೋಽರೇರ್ಹೃದಯಾನಿ ಕಂಪಯನ್॥*
*ತ್ವಂ ತಿಗ್ಮಧಾರಾಸಿ ವರಾರಿ ಸೈನ್ಯಮೀಶ ಪ್ರಮುಕ್ತೋ ಮಮ ಛಿಂದಿ ಛಿಂದಿ*
*ಚಕ್ಷೂಂಷಿ ಚರ್ಮಂಛತಚಂದ್ರ ಛಾದಯ ದ್ವಿಷಾಯಘೋನಾಂ ಹರ ಪಾಪ ಚಕ್ಷುಷಾಮ್॥*
*ಯನ್ನೋ ಭಯಂ ಗ್ರಹೇಭ್ಯೋಽಭೂತ್ ಕೇತುಭ್ಯೋ ನೃಭ್ಯ ಏವ ಚ*
*ಸರೀಸೃಪೇಭ್ಯೋ ದಂಷ್ಟ್ರೀಭ್ಯೋ ಭೂತೇಭ್ಯೋಽಹೋಭ್ಯ ಏವ ವಾ॥*
*ಸರ್ವಾಣ್ಯತಾನಿ ಭಗವನ್ನಾಮರೂಪಾಸ್ತ್ರಕೀರ್ತ ನಾತ್*
*ಪ್ರಯಾಂತು ಸಂಕ್ಷಯಂ ಸದ್ಯೋ ಯೇ ನಃ ಶ್ರೇಯಃ ಪ್ರತೀಪಕಾಃ॥*
*ಗರುಡೋ ಭಗವಾನ್ ಸ್ತೋತ್ರ ಸ್ತೋಭಶ್ಛಂದೋಮಯಃ ಪ್ರಭುಃ*
*ರಕ್ಷತ್ವಶೇಷ ಕೃಚ್ಛ್ರೇಭ್ಯೋ ವಿಷ್ವಕ್ಸೇನಃ ಸ್ವನಾಮಭಿಃ॥*
*ಸರ್ವಾಪದ್ ಭ್ಯೋ ಹರೇರ್ನಾಮರೂಪಯಾನಾಯುಧಾನಿ ನಃ*
*ಬುದ್ಧೀಂದ್ರಿಯ ಮನಃ ಪ್ರಾಣಾನ್ ಪಾಂತು ಪಾರ್ಷದ ಭೂಷಣಾಃ॥*
*ತಥಾ ಹಿ ಭಗವಾನೇವ ವಸ್ತುತಃ ಸದಸಚ್ಚ ಯತ್*
*ಸತ್ಯೇನಾನೇನ ನಃ ಸರ್ವೇ ಯಾಂತು ನಾಶಮುಪದ್ರವಾಃ॥*
*ಯಥೈಕಾತ್ಮ್ಯಾನುಭವಾನಾಂ ವಿಕಲ್ಪರಹಿತಃ ಸ್ವಯಮ್*
*ಭೂಷಣಾಯುಧಲಿಂಗಾಖ್ಯಾ ಧತ್ತೇ ಶಕ್ತಿಃ ಸ್ವಮಾಯಯಾ॥*
*ತೇನೈ ಸತ್ಯಮಾನೇನ ಸರ್ವಜ್ಞೋ ಭಗವಾನ್ ಹರಿಃ*
*ಪಾತು ಸರ್ವೈಃ ಸ್ವರೂಪೈರ್ನಃ ಸದಾ ಸರ್ವತ್ರ ಸರ್ವಗಃ॥*
*ವಿದಿಕ್ಷು ದಿಕ್ಷೂರ್ಧ್ವಮಧಃ ಸಮಂತಾದಂತರ್ಬಹಿರ್ಭಗವಾನ್ ನಾರಸಿಂಹಃ*
*ಪ್ರಹಾಪಯಾ ಲ್ಲೋಕಭಯಂ ಖನೇನ ಸ್ವತೇಜಸಾ ಗ್ರಾಸ್ತ ಸಮಸ್ತ ತೇಜಾಃ॥*

ಭಗವಾನ್ ಶ್ರೀಹರಿಯು ಗರುಡನ ಬೆನ್ನಿನ ಮೇಲೆ ತನ್ನ ಪಾದಕಮಲವನ್ನು ಇರಿಸಿದ್ದಾನೆ. ಅಣಿಮಾದಿ ಅಷ್ಟಸಿದ್ಧಿಗಳು ಆತನ ಸೇವೆಯಲ್ಲಿ ತಲ್ಲೀನವಾಗಿವೆ. ಆತನ ಎಂಟು ಹಸ್ತಗಳಲ್ಲಿ ಶಂಖ, ಚಕ್ರ, ಗುರಾಣಿ, ಕತ್ತಿ, ಗದೆ, ಬಾಣ, ಧನುಸ್ಸು ಮತ್ತು ಪಾಶಗಳು ಇವೆ. ಆತನೇ ಓಂಕಾರ ಸ್ವರೂಪಿಯಾದ ಪ್ರಭುವು. ಆತನು ಎಲ್ಲಾ ರೀತಿಗಳಲ್ಲೂ, ಎಲ್ಲಾ ಕಡೆಗಳಿಂದಲೂ, ಎಲ್ಲಾ ಅಪಾಯಗಳಲ್ಲೂ ನನ್ನ ರಕ್ಷಣೆಯನ್ನು ಮಾಡಲಿ. ನೀರಿನ ಒಳಗಡೆ ಜಲಜಂತುಗಳಿಂದ, ವರುಣನ ಪಾಶದಿಂದ ಮತ್ಸ್ಯಮೂರ್ತಿಯು ನನ್ನನ್ನು ರಕ್ಷಿಸಲಿ. ಭೂಮಿಯ ಮೇಲೆ ಮಾಯಾಶಕ್ತಿಯಿಂದ ಬ್ರಹ್ಮಚಾರಿಯ ರೂಪವನ್ನು ಧರಿಸಿರುವ ವಾಮನ ಭಗವಂತನು, ಆಕಾಶದಲ್ಲಿ ವಿಶ್ವರೂಪಿ ಶ್ರೀತ್ರಿವಿಕ್ರಮ ಭಗವಂತನು ನನ್ನ ರಕ್ಷಣೆಯನ್ನು ಮಾಡಲಿ. ಯಾರ ಘೋರ ಅಟ್ಟಹಾಸವು ದಶದಿಶೆಗಳಲ್ಲೂ ಪ್ರತಿಧ್ವನಿಸಿ ಗರ್ಭವತಿಯರಾಗಿದ್ದ ದೈತ್ಯ ಪತ್ನಿಯರ ಗರ್ಭಗಳನ್ನು ಹೊರಹಾಕುತ್ತಿತ್ತೋ, ಯಾರು ದೈತ್ಯ ಯೂತ ಪತಿಗಳ ಶತ್ರುವಾಗಿರುವನೋ ಅಂತಹ ನೃಸಿಂಹ ಭಗವಂತನು ಕಾಡು, ಕೋಟೆ, ರಣಭೂಮಿ ಮುಂತಾದ ಸ್ಥಳಗಳಲ್ಲಿ ನನ್ನನ್ನು ಕಾಪಾಡಲಿ. ಮಾರ್ಗಮಧ್ಯದಲ್ಲಿ ತನ್ನ ಕೋರೆಹಲ್ಲುಗಳ ಮೇಲೆ ಪೃಥಿವಿಯನ್ನು ಹೊತ್ತ ಯಜ್ಞಮೂರ್ತಿ ವರಾಹಭಗವಂತನೂ, ಪರ್ವತಶಿಖರಗಳ ಮೇಲೆ ಪರಶುರಾಮನೂ, ಪ್ರವಾಸ ಸಮಯದಲ್ಲಿ ಲಕ್ಷ್ಮಣ ಸಮೇತನಾಗಿರುವ ಶ್ರೀರಾಮಚಂದ್ರನೂ ನನ್ನನ್ನು ರಕ್ಷಿಸಲಿ. ನಾರಾಯಣ ಭಗವಂತನು ಮಾರಣ, ಮೋಹನ ಮುಂತಾದ ಭಯಂಕರ ಅಭಿಚಾರ ಗಳಿಂದಲೂ ಮತ್ತು ಎಲ್ಲಾ ಪ್ರಕಾರಕ ಪ್ರಮಾದಗಳಿಂದಲೂ ನನ್ನನ್ನು ರಕ್ಷಿಸಲಿ. ಋಷಿ ಶ್ರೇಷ್ಠನಾದ ನರನು ಗರ್ವದಿಂದಲೂ, ಯೋಗೇಶ್ವರನಾದ ಭಗವಾನ್ ದತ್ತಾತ್ತೇಯನು ಯೋಗಗಳಿಗೆ ಒದಗುವ ವಿಘ್ನಗಳಿಂದಲೂ ಮತ್ತು ತ್ರಿಗುಣಾಧಿಪತಿ ಯಾದ ಭಗವಾನ್ ಕಪಿಲನು ಕರ್ಮಬಂಧನಗಳಿಂದಲೂ ನನ್ನನ್ನು ರಕ್ಷಿಸಲಿ. ಪರಮರ್ಷಿಯಾದ ಸನತ್ಕುಮಾರನು ಕಾಮದೇವನಿಂದಲೂ, ಹಯಗ್ರೀವ ಭಗವಂತನು ಹಾದಿಯಲ್ಲಿ ಹೋಗುತ್ತಿರುವಾಗ ದೇವಮೂರ್ತಿಗಳಿಗೆ ನಮಸ್ಕಾರ ಮಾಡದಿರುವ ಅಪರಾಧದಿಂದಲೂ, ದೇವರ್ಷಿ ನಾರದನು ಸೇವಾಪರಾಧಗಳಿಂದಲೂ[೨೦], ಭಗವಾನ್ ಕಚ್ಛಪನು ಎಲ್ಲಾ ಬಗೆಯ ನರಕಗಳಿಂದಲೂ ನನ್ನನ್ನು ಕಾಪಾಡಲಿ. ಅಪಥ್ಯದಿಂದ ಭಗವಾನ್ ಧನ್ವಂತರಿ, ಸುಖ-ದುಃಖ ಮುಂತಾದ ಭಯಂಕರ ದ್ವಂದ್ವಗಳಿಂದ ಜಿತೇಂದ್ರಿಯನಾದ ಭಗವಾನ್ ವೃಷಭದೇವನು, ಲೋಕಾಪವಾದದಿಂದ ಯಜ್ಞ ಭಗವಂತನೂ, ಮನುಷ್ಯ ನಿರ್ಮಿತವಾದ ತೊಂದರೆ ಮತ್ತು ಕಷ್ಟಗಳಿಂದ ಬಲರಾಮನೂ ಮತ್ತು ವಿಷಪೂರಿತ ಹಾಗೂ ಕ್ರೋಧಿ ಸರ್ಪಗಳಿಂದ ಶ್ರೀ ಶೇಷಮೂರ್ತಿಯು ನನ್ನನ್ನು ರಕ್ಷಿಸಲಿ. ಅಜ್ಞಾನದಿಂದ ಭಗವಾನ್ ಶ್ರೀ ಕೃಷ್ಣದ್ವೈಪಾಯನ ವ್ಯಾಸರೂ, ಪ್ರಮಾದ ಮತ್ತು ಪಾಖಂಡಿಗಳಿಂದ ಭಗವಾನ್ ಬುದ್ಧದೇವನೂ, ಪಾಪವೇ ಬಹುಳವಾಗಿರುವ ಕಲಿಕಾಲದ ದೋಷಗಳಿಂದ ಧರ್ಮರಕ್ಷಣಾರ್ಥವಾಗಿಯೇ

---

೨೦. ಸೇವಾಪರಾಧಗಳು ೩೨ ಎಂದು ಹೇಳಲಾಗುತ್ತದೆ. ಅವುಗಳ ವಿವರವು ಇಂತಿದೆ :

೧. ವಾಹನಾರೂಢನಾಗಿ ಅಥವಾ ಪಾದಗಳಲ್ಲಿ ಚಪ್ಪಲಿಧರಿಸಿ ದೇವಾಲಯವನ್ನು ಪ್ರವೇಶಿಸುವುದು.
೨. ರಥಯಾತ್ರೆ, ಜನ್ಮಾಷ್ಟಮಿ ಇತ್ಯಾದಿ ಉತ್ಸವಗಳನ್ನು ಆಚರಿಸದಿರುವುದು ಅಥವಾ ಅವನ್ನು ನೋಡದಿರುವುದು.
೩. ದೇವಮೂರ್ತಿಯನ್ನು ನೋಡಿದ ನಂತರ ನಮಸ್ಕರಿಸದೇ ಇರುವುದು.
೪. ಅಶೌಚವಿರುವಾಗ ದೇವಾಲಯವನ್ನು ಪ್ರವೇಶಿಸುವುದು. ದೇವಮೂರ್ತಿಗೆ ನಮಸ್ಕರಿಸುವುದು.
೫. ಒಂದೇ ಕೈಯಿಂದ ನಮಸ್ಕರಿಸುವುದು.
೬. ಪ್ರದಕ್ಷಿಣೆ ಮಾಡುವಾಗ ದೇವಮೂರ್ತಿಯ ಮುಂಭಾಗಕ್ಕೆ ಬಂದಾಗ ಸ್ವಲ್ಪನಿಲ್ಲದೆ ಪ್ರದಕ್ಷಿಣೆ ಮುಂದುವರಿಸುವುದು ಅಥವಾ ಕೇವಲ ಮುಂದೆ ಮಾತ್ರವೇ ಸುತ್ತುತ್ತಿರುವುದು.
೭. ಭಗವಂತನ ಮೂರ್ತಿಯ ಮುಂದೆ ಕಾಲು ಚಾಚಿಕೊಂಡು ಕೂರುವುದು.
೮. ಭಗವಂತನ ಮೂರ್ತಿಯು ಮುಂದೆ ಮೊಣಕಾಲುಗಳನ್ನು ಪರಸ್ಪರ ಮೇಲಿರಿಸಿಕೊಂಡು ಕೈಯಿಂದ ಹಿಡಿದು ಕೂರುವುದು.
೯. ಭಗವಂತನ ಮೂರ್ತಿಯ ಮುಂದೆ ನಿದ್ರಿಸುವುದು.
೧೦. ಭಗವಂತನ ಮೂರ್ತಿಯ ಮುಂದೆ ಕುಳಿತು ಊಟ ಮಾಡುವುದು.
೧೧. ಭಗವಂತನ ಮೂರ್ತಿಯ ಮುಂದೆ ಸುಳ್ಳನ್ನು ಹೇಳುವುದು.
೧೨. ಭಗವಂತನ ಮೂರ್ತಿಯ ಮುಂದೆ ಜೋರಾಗಿ ಅರಚುತ್ತಾ ಮಾತನಾಡುವುದು.
೧೩. ಭಗವಂತನ ಮೂರ್ತಿಯ ಮುಂದೆ ಪರಸ್ಪರ ಮಾತನಾಡುತ್ತಾ ಕೂರುವುದು.
೧೪. ಭಗವಂತನ ಮೂರ್ತಿಯ ಮುಂದೆ ಕಿರುಚಾಡುವುದು.
೧೫. ಭಗವಂತನ ಮೂರ್ತಿಯ ಮುಂದೆ ಜಗಳವಾಡುವುದು.
೧೬. ಭಗವಂತನ ಮೂರ್ತಿಯ ಮುಂದೆ ಇತರರಿಗೆ ಹಿಂಸೆ ಕೊಡುವುದು; ನೋವುಂಟು ಮಾಡುವುದು.
೧೭. ಭಗವಂತನ ಮೂರ್ತಿಯ ಮುಂದೆ ಯಾರಿಗಾದರೂ ಒಳಿತು ಮಾಡುತ್ತಿರುವಂತೆ ಅನುಗ್ರಹ ವಾಕ್ಯ ನುಡಿಯುವುದು.
೧೮. ಭಗವಂತನ ಮೂರ್ತಿಯ ಮುಂದೆ ಯಾರ ಬಗ್ಗೆಯಾದರೂ ನಿಷ್ಠೂರವಾದ ವಿರೋಧದ ಮಾತನ್ನಾಡುವುದು.
೧೯. ಭಗವಂತನ ಮೂರ್ತಿಯ ಮುಂದೆ ಮೈಯ್ಯನ್ನೆಲ್ಲಾ ಕಂಬಳಿ ಅಥವಾ ಹೊದಿಕೆಯಿಂದ ಮುಚ್ಚಿಕೊಳ್ಳುವುದು.
೨೦. ಭಗವಂತನ ಮೂರ್ತಿಯ ಮುಂದೆ ಇತರರ ನಿಂದೆಯನ್ನು ಮಾಡುವುದು.
೨೧. ಭಗವಂತನ ಮೂರ್ತಿಯ ಮುಂದೆ ಇತರರ ಸ್ತುತಿಯನ್ನು ಮಾಡುವುದು.
೨೨. ಭಗವಂತನ ಮೂರ್ತಿಯ ಮುಂದೆ ಅಶ್ಲೀಲ ಶಬ್ದವನ್ನು ಆಡುವುದು.
೨೩. ಭಗವಂತನ ಮೂರ್ತಿಯ ಮುಂದೆ ಅಪಾನವಾಯುವನ್ನು ತ್ಯಜಿಸುವುದು.
೨೪. ಶಕ್ತನಾಗಿದ್ದರೂ ಗೌಣ ಅಥವಾ ಸಾಮಾನ್ಯ ಉಪಚಾರಗಳಿಂದ ಭಗವಂತನನ್ನು ಉಪಚರಿಸುತ್ತಾ ಪೂಜಿಸುವುದು.
೨೫. ಭಗವಂತನಿಗೆ ನಿವೇದನೆ ಮಾಡದೆಯೇ ಭಕ್ಷ್ಯವನ್ನು ಸ್ವೀಕರಿಸುವುದು.
೨೬. ಯಾವ ಋತುವಿನಲ್ಲಾದರೂ ಮೊದಲ ಫಲವಾಗಿ ಬರುವುದನ್ನು ಭಗವಂತನಿಗೆ ನಿವೇದನೆ ಮಾಡದೆ ಇರುವುದು.
೨೭. ಯಾವುದೇ ಫಲವನ್ನಾಗಲಿ, ಕಾಯಿಯನ್ನಾಗಲಿ ಮುಂಭಾಗವನ್ನು ಮುರಿದುಕೊಂಡು ಉಳಿದ ಭಾಗವನ್ನು ಭಗವಂತನ ನೈವೇದ್ಯಕ್ಕೆ ಬಳಸುವುದು.
೨೮. ಭಗವಂತನ ಮೂರ್ತಿಗೆ ಬೆನ್ನುಮಾಡಿ ಕುಳಿತುಕೊಳ್ಳುವುದು.
೨೯. ಭಗವಂತನ ಮೂರ್ತಿಯ ಮುಂದೆ ಬೇರೊಬ್ಬರಿಗೆ ನಮಸ್ಕಾರ ಮಾಡುವುದು.
೩೦. ಗುರುವಿನ ಪ್ರಾರ್ಥನೆ, ಕುಶಲ ಪ್ರಶ್ನೆ ಮತ್ತು ಅವರಿಗೆ ಅಭಿವಾದನೆಯನ್ನು ಮಾಡದಿರುವುದು.
೩೧. ತನ್ನನ್ನು ತಾನೇ ಪ್ರಶಂಸಿಕೊಳ್ಳುವುದು. ೩೨.ಯಾವುದೇ ದೇವರನ್ನು ನಿಂದಿಸುವುದು.

ಮತ್ಸ್ಯಾವತಾರವನ್ನು ಧರಿಸಿರುವ ಭಗವಾನ್ ಕಲ್ಕಿಯು ನನ್ನನ್ನು ರಕ್ಷಿಸಲಿ. ಪ್ರಾತಃಕಾಲದಲ್ಲಿ ಭಗವಾನ್ ಕೇಶವನು ತನ್ನ ಗದೆಯನ್ನು ಧರಿಸಿ, ಸ್ವಲ್ಪ ಹೊತ್ತು ಏರಿದ ನಂತರ ಭಗವಾನ್ ಗೋವಿಂದನು ತನ್ನ ಮುರಳಿಯನ್ನು ಹಿಡಿದು, ಮಧ್ಯಾಹ್ನಕ್ಕೆ ಮೊದಲು ಭಗವಾನ್ ನಾರಾಯಣನು ತನ್ನ ತೀಕ್ಷ್ಣ ಶಕ್ತಿಯನ್ನು ಧರಿಸಿ, ಮಧ್ಯಾಹ್ನದ ಕಾಲದಲ್ಲಿ ಭಗವಾನ್ ವಿಷ್ಣು ತನ್ನ ಚಕ್ರರಾಜ ಸುದರ್ಶನವನ್ನು ಧರಿಸಿ, ಮಧ್ಯಾಹ್ನದ ನಂತರ ಭಗವಾನ್ ಮಧುಸೂದನನು ತನ್ನ ಧನುಸ್ಸನ್ನು ಧರಿಸಿ ನನ್ನನ್ನು ರಕ್ಷಿಸಲಿ. ಸಾಯಂಕಾಲದಲ್ಲಿ ಬ್ರಹ್ಮಾದಿ ತ್ರಿಮೂರ್ತಿಗಳನ್ನು ಧರಿಸಿರುವ ಮಾಧವನು, ಸೂರ್ಯಾಸ್ತದ ನಂತರ ಹೃಷೀಕೇಶನು, ಅರ್ಧರಾತ್ರಿ ಸಮಯದಲ್ಲಿ ಹಾಗೂ ಅದಕ್ಕೆ ಪೂರ್ವ ಒಬ್ಬೊಂಟಿಗನಾಗಿರುವ ಭಗವಂತ ಪದ್ಮನಾಭನು ಅರ್ಧ ರಾತ್ರಿಯ ನಂತರ ಶ್ರೀವತ್ಸ ಲಾಂಛನ ಧರಿಸಿರುವ ಶ್ರೀಹರಿ, ಉಷಾ ಕಾಲದಲ್ಲಿ ಖಡ್ಗಧಾರಿಯಾದ ಭಗವಾನ್ ಜನಾರ್ದನ, ಸೂರ್ಯೋದಯಕ್ಕೆ ಮೊದಲು ಶ್ರೀ ದಾಮೋದರ ಮತ್ತು ಸಂಪೂರ್ಣ ಸಂಧ್ಯಾಕಾಲಗಳಲ್ಲಿ ಕಾಲ ಮೂರ್ತಿಯೂ, ವಿಶ್ವೇಶ್ವರನೂ ಆಗಿರುವ ಭಗವಾನ್ ವಿಶ್ವಕರ್ಮನು ನನ್ನ ರಕ್ಷಣೆಯನ್ನು ಮಾಡಲಿ.

ಸುದರ್ಶನ ಚಕ್ರವೇ ನಿನ್ನ ಆಕಾರವು (ರಥಚಕ್ರ) ಚಕ್ರದಂತೆ ಇದೆ. ನಿನ್ನ ಅಂಚಿನ ಭಾಗವು ಪ್ರಳಯಾಗ್ನಿಯಂತೆ ಬಹು ತೀವ್ರವಾಗಿದೆ. ನೀನು ಭಗವಂತನ ಪ್ರೇರಣೆಯಿಂದ ಎಲ್ಲಾ ಕಡೆಗಳಿಗೂ ಚಲಿಸುತ್ತೀಯೆ. ಅಗ್ನಿಯು ವಾಯುವಿನ ನೆರವಿನಿಂದ ಒಣಗಿರುವ ಹುಲ್ಲು ಎಲೆಗಳನ್ನು ಹೇಗೆ ಸುಲಭವಾಗಿ ಸುಟ್ಟು ಹಾಕುತ್ತದೆಯೋ, ಅದೇ ರೀತಿಯಾಗಿ ನೀನು ನನ್ನ ಶತ್ರುಗಳನ್ನು ಶೀಘ್ರಾತಿ ಶೀಘ್ರವಾಗಿ ಸುಟ್ಟು ಬೂದಿಯನ್ನಾಗಿ ಮಾಡು.

ಕೌಮೋದಕಿ ಗದೆಯೇ, ನಿನ್ನಿಂದ ಸಿಡಿಯುವ ಕಿಡಿಗಳ ಸ್ಪರ್ಶವು ವಜ್ರ ಭೇದನದಂತೆ ಅತ್ಯಂತ ಅಸಹನೀಯವಾದುದು. ನೀನು ಭಗವಾನ್ ಅಜಿತನಿಗೆ ಪ್ರಿಯ. ನಾನು ಆ ಭಗವಂತನ ಸೇವಕ. ಆದ್ದರಿಂದ ನೀನು ಕೂಷ್ಮಾಂಡ, ವಿನಾಯಕ, ಯಕ್ಷ, ರಾಕ್ಷಸ, ಭೂತ ಮತ್ತು ಗ್ರಹಗಳನ್ನು ಈಗಲೇ ಚೂರ್ಣವಾಗುವಂತೆ ಹೊಸಗಿಹಾಕು ಮತ್ತು ನನ್ನ ಶತ್ರುಗಳನ್ನು ಚೂರು ಚೂರಾಗಿ ಮಾಡು.

ಶಂಖಶ್ರೇಷ್ಠ ಪಾಂಚಜನ್ಯವೇ, ಭಗವಾನ್ ಕೃಷ್ಣನು ಊದಿದರೆ ಭಯಂಕರವಾಗಿ ಮೊಳಗುತ್ತೀಯೆ. ನೀನು ಆ ಭಯಂಕರ ಸದ್ದಿನ ಪ್ರಭಾವದಿಂದ ನನ್ನ ಶತ್ರುಗಳ ಹೃದಯವನ್ನು ನಡುಗಿಸಿ ಅದರಲ್ಲಿ ಭೀತಿಯನ್ನು ತುಂಬು. ಹಾಗೆಯೇ ಇಲ್ಲಿಂದ ಯಾತುಧಾನ, ಪ್ರಮಥ, ಪ್ರೇತ, ಮಾತೃಕಾ, ಪಿಶಾಚ ಹಾಗೂ ಬ್ರಹ್ಮರಾಕ್ಷಸ ಮುಂತಾದ ಭಯಂಕರ ಪ್ರಾಣಿಗಳನ್ನು ಇಲ್ಲಿಂದ ಕೂಡಲೇ ಓಡಿಸಿ ಬಿಡು.

ಭಗವಂತನ ಪ್ರೀತಿ ಪಾತ್ರವಾಗಿರುವ ಖಡ್ಗವೇ, ನೀನು ತುಂಬಾ ಮೊನಚಾಗಿರುವೆ. ಭಗವಂತನ ಪ್ರೇರಣೆಯಿಂದ ನೀನು ನನ್ನ ಎಲ್ಲಾ ಶತ್ರುಗಳನ್ನು ಖಂಡ ತುಂಡವನ್ನಾಗಿ ಮಾಡಿ ಬಿಡು.

ಭಗವಂತನಿಗೆ ಪ್ರಿಯವಾಗಿರುವ ಗುರಾಣಿಯೇ, ನಿನ್ನಲ್ಲಿ ಸಾವಿರಾರು ಚಂದ್ರಾಕಾರ ಮಂಡಲಗಳಿವೆ. ಪಾಪ ದೃಷ್ಟಿಯುಳ್ಳ ಪಾಪಾತ್ಮರಾದ ಶತ್ರುಗಳ ಕಣ್ಣನ್ನು ಮುಚ್ಚುವಂತೆ ಮಾಡು, ಅವರನ್ನು ಎಲ್ಲಾ ಕಾಲಗಳಿಗೂ ಅಂಧರಾಗುವಂತೆ ಮಾಡು.

ಸೂರ್ಯ ಮುಂತಾದ ಗ್ರಹಗಳು, ಧೂಮಕೇತುವೇ ಮೊದಲಾದ ಕೇತುಗಳು, ದುಷ್ಟಮನುಷ್ಯರು, ಸರ್ಪ ಮುಂತಾದ ಹರಿದಾಡುವ ಜಂತುಗಳು, ಕೋರೆ ಹಲ್ಲುಗಳಿರುವ ಭಯಂಕರ ದುಷ್ಟ ಮೃಗಗಳು, ಭೂತ-ಪ್ರೇತ ಮುಂತಾದ ಪಾಪಿ ಪ್ರಾಣಿಗಳಿಂದ ನಮಗೆ ಯಾವ ರೀತಿಯ ಭಯ ಉಂಟಾಗುವುದೋ ಮತ್ತು ನಮ್ಮ ಒಳಿತಿಗೆ ಯಾವುವು ವಿರೋಧವಾಗಿರುವವೋ ಅವೆಲ್ಲವೂ ಭಗವಂತನ ನಾಮ, ರೂಪ ಮತ್ತು ಆಯುಧಗಳ ಸಂಕೀರ್ತನೆಯನ್ನು ಮಾಡುವುದರಿಂದ ಕೂಡಲೇ ನಾಶವಾಗುತ್ತವೆ. ಬೃಹದ್, ರಥಂತರ ಮುಂತಾದ ಸಾಮವೇದಿಯ ಸ್ತೋತ್ರಗಳಿಂದ ಯಾರ ಸ್ತುತಿಯನ್ನು ಮಾಡಲಾಗುತ್ತಿದೆಯೋ ಆ ವೇದಮೂರ್ತಿಯು ಭಗವಾನ್ ಗರುಡ ಮತ್ತು ವಿಷ್ವಕ್ಸೇನರು ನಿಮ್ಮ ನಾಮೋಚ್ಚಾರಣೆಯ ಪ್ರಭಾವದಿಂದ ನಮ್ಮನ್ನು ಎಲ್ಲಾ ಬಗೆಯ ವಿಪತ್ತುಗಳಿಂದ ರಕ್ಷಿಸಲಿ. ಭಗವಾನ್ ಶ್ರೀ ಹರಿಯ ನಾಮ, ರೂಪ, ವಾಹನ, ಆಯುಧ ಮತ್ತು ಶ್ರೇಷ್ಠ ಪಾರ್ಷದರು ನಮ್ಮ ಬುದ್ಧಿ ಇಂದ್ರಿಯ ಮನ ಮತ್ತು ಪ್ರಾಣಗಳನ್ನು ಎಲ್ಲಾ ಬಗೆಯ ಆಪತ್ತುಗಳಿಂದ ರಕ್ಷಿಸಲಿ.

ಕಾರ್ಯ ಅಥವಾ ಕಾರಣರೂಪೀ ಜಗತ್ತು ಎಷ್ಟು ವ್ಯಾಪಕವಾಗಿದೆಯೋ ಅದೆಲ್ಲವೂ ವಾಸ್ತವವಾಗಿ ಭಗವಂತನದೇ. ಈ ಸತ್ಯವನ್ನು ಅರಿಯುವುದರಿಂದ ನಮ್ಮ ಎಲ್ಲಾ ವಿಘ್ನಗಳೂ ಪರಿಹಾರವಾಗುತ್ತವೆ. ಯಾರು ಬ್ರಹ್ಮ ಮತ್ತು ಆತ್ಮದ ಏಕತೆಯನ್ನು ಅನುಭವ ಪೂರ್ವಕವಾಗಿ ಅರಿತುಕೊಂಡಿದ್ದಾರೆಯೋ ಅಂತಹವರ ದೃಷ್ಟಿಯಲ್ಲಿ ಭಗವಂತನ ಸ್ವರೂಪವು ಸಕಲ ವಿಕಲ್ಪಗಳಿಂದ, ಭೇದಗಳಿಂದ ಮುಕ್ತವಾಗಿದೆ. ಆದರೂ ತನ್ನ ಮಾಯಾ ಶಕ್ತಿಯ ಮುಖಾಂತರ ಭೂಷಣ, ಆಯುಧ ಮತ್ತು ರೂಪ ಎಂಬ ಶಕ್ತಿಗಳನ್ನು ಧರಿಸಿರುತ್ತಾನೆ. ಇದು ನಿಶ್ಚಯವಾಗಿಯೂ ಸತ್ಯ. ಇದೇ ಕಾರಣದಿಂದ ಸರ್ವಜ್ಞ, ಸರ್ವವ್ಯಾಪಕನಾಗಿರುವ ಭಗವಾನ್ ಶ್ರೀಹರಿ ಸದಾ ಎಲ್ಲಾ ಕಡೆಗಳಲ್ಲೂ ಎಲ್ಲಾ ರೂಪಗಳಲ್ಲೂ ನಮ್ಮನ್ನು ರಕ್ಷಿಸಲಿ. ತಮ್ಮ ಭಯಂಕರ ಅಟ್ಟಹಾಸದಿಂದ ಎಲ್ಲರನ್ನೂ ಓಡಿಸುವ, ತಮ್ಮ ತೇಜಸ್ಸಿನಿಂದ ಎಲ್ಲ ತೇಜವನ್ನು ಅಪಹರಿಸುವಂತಹ ಭಗವಂತನಾದ ನೃಸಿಂಹದೇವನು, ದಿಶೆ-ವಿದಿಶೆಗಳಲ್ಲಿ, ಮೇಲೆ-ಕೆಳಗೆ, ಒಳಗೆ-ಹೊರಗೆ ಎಲ್ಲಾ ಕಡೆಗಳಿಂದಲೂ ನಮ್ಮನ್ನು ಚೆನ್ನಾಗಿ ರಕ್ಷಿಸಲಿ.

ತ್ವಷ್ಟೃ ಬ್ರಹ್ಮನ ಸುತನಾದ ವಿಶ್ವರೂಪಾಚಾರ್ಯನು ಉಪದೇಶಿಸಿರುವ ಈ ಕವಚರಾಜವನ್ನು ಅನುಷ್ಠಾನ ಮಾಡಿ ಸಕಲ ಭಯ, ಪಾಪಗಳಿಂದ ಮುಕ್ತರಾಗಲಿ ಎಂದು ಆಶಿಸಿ ಜಗತ್ಕಲ್ಯಾಣಕ್ಕಾಗಿ ಪ್ರಾರ್ಥಿಸುತ್ತೇನೆ.

---

# 6 ಈ ಆಖ್ಯಾಯಿಕೆಯ ಪರಮಾರ್ಥ ಮತ್ತು ಐತಿಹಾಸಿಕತೆ

ಈಗಾಗಲೇ ವಿಶ್ವರೂಪಾಚಾರ್ಯರ ಕಥೆಯನ್ನು ತಿಳಿದಿದ್ದೇವೆ. ಇದು ವೇದದಲ್ಲಿ ಹೇಳಿರುವ ಆಖ್ಯಾಯಿಕೆ. ಗದ್ಯದಲ್ಲಿ ಕಥಾ ಮತ್ತು ಆಖ್ಯಾಯಿಕಾ ಎಂಬ ಎರಡು ಪ್ರಭೇದಗಳು. ಕಾಲ್ಪನಿಕ ವಸ್ತು ಉಳ್ಳದ್ದು ಕಥೆ. ಯಥಾರ್ಥವಾದ ನಿಜವಾಗಿ ನಡೆದಿರುವ ಪ್ರಸಂಗ ಆಖ್ಯಾಯಿಕೆ. ಆದ್ದರಿಂದಲೇ ವೇದೋಕ್ತವಾಗಿರುವ ಈ ಆಖ್ಯಾಯಿಕೆಯು ತರುವಾಯ ಪುರಾಣ ಸಾಹಿತ್ಯದಲ್ಲಿ ವಿಪುಲವಾಗಿ ವಿವರಿತವಾಗಿದ್ದು ಈ ಸಂಗತಿಯು ಕಲ್ಪನೆಯಲ್ಲ. ಎಂಬುದನ್ನು ಖಚಿತಪಡಿಸುತ್ತದೆ. ಇದರಲ್ಲಿ ಅನೇಕ ವಿಧವಾದ ಆಧ್ಯಾತ್ಮಿಕ ರಹಸ್ಯಗಳು ಅಡಗಿವೆ ಎಂಬುದನ್ನು ನಾವು ಗ್ರಹಿಸಬೇಕು. ಮೊದಲಿಗೆ ಕೃಷ್ಣ ಯಜುರ್ವೇದವು ಈ ವಿವರವನ್ನು ಹೇಳಿದೆ[1] –

ತ್ವಷ್ಟ್ರವಿಗೆ ವಿಶ್ವರೂಪನೆಂಬ ಮಗನುಂಟು. ಆತನಿಗೆ ಮೂರು ತಲೆಗಳು. ಒಂದರಿಂದ ಸೋಮಪಾನವನ್ನು, ಇನ್ನೊಂದರಿಂದ ಅನ್ನವನ್ನು, ಮೂರನೆಯದರಿಂದ ಸುರಾಪಾನವನ್ನು ಮಾಡುತ್ತಿದ್ದ. ಈತನು ದೇವತೆಗಳಿಗೆ ಪುರೋಹಿತನಾಗಿದ್ದ. ಅಸುರರು ಮತ್ತು ದೇವತೆಗಳು ದಾಯಾದಿಗಳು. ವಿಶ್ವರೂಪಾಚಾರ್ಯರಿಗೆ ಸುರರು ಸೋದರ ಮಾವಂದಿರು. ಆದ್ದರಿಂದ ದೇವತೆಗಳಿಗೆ ಹವಿರ್ಭಾಗವನ್ನು ಪ್ರತ್ಯಕ್ಷವಾಗಿಯೂ, ಅಸುರರಿಗೆ ಪರೋಕ್ಷವಾಗಿಯೂ ಅರ್ಪಿಸುತ್ತಿದ್ದರು. ದೇವೇಂದ್ರನೇ ಈ ರಹಸ್ಯವನ್ನು ಅರಿತುಕೊಂಡನಂತೆ. ವಿಶ್ವರೂಪಾಚಾರ್ಯರ ಈ ಅಸುರಪಕ್ಷಪಾತದ ಫಲವಾಗಿ ತನ್ನ ರಾಜ್ಯವೇ ಅಸುರರ ಪಾಲಾದೀತೆಂದು ದೇವೇಂದ್ರ ಹೆದರಿದ. ಇದಕ್ಕಾಗಿ ವಿಶ್ವರೂಪಾಚಾರ್ಯನ ತಲೆಗಳನ್ನು ವಜ್ರಾಯುಧದಿಂದ ತರಿದುಹಾಕಿದ. ಆಗ ಸೋಮಪಾನ ಮಾಡುತ್ತಿದ್ದ ತಲೆಯು ಕಪಿಂಜಲ ಪಕ್ಷಿಯಾಗಿಯೂ, ಸುರಾಪಾನ ಮಾಡುತ್ತಿದ್ದ ತಲೆಯು ಗುಬ್ಬಚ್ಚಿಯಾಗಿಯೂ, ಅನ್ನವನ್ನು ತಿನ್ನುತ್ತಿದ್ದ ತಲೆಯು ತಿತ್ತಿರಿ ಪಕ್ಷಿಯಾಗಿಯೂ ಆದವು.

ಈ ವಿಷಯವನ್ನು ತಿಳಿದ ತ್ವಷ್ಟೃವು ಪುತ್ರಶೋಕದಿಂದ ಇಂದ್ರನಿಗೆ ಅಪಕಾರ ಮಾಡಬೇಕೆಂದು ತಪಸ್ಸನ್ನು ಪ್ರಾರಂಭಿಸಿದ. ಈ ಸಂದರ್ಭದಲ್ಲಿ ತ್ವಷ್ಟೃವು ಆಚರಿಸಿದ ಯಜ್ಞದಲ್ಲಿ ಹವಿಸ್ಸು ಅರ್ಪಿಸುವಾಗ ಹೇಳಿದ ಮಂತ್ರದ ಉಚ್ಚಾರಣಾ ದೋಷದ ಫಲವಾಗಿ 'ಇಂದ್ರನನ್ನು ವಧಿಸುವವನು ಸೃಷ್ಟಿಯಾಗಲಿ' ಎಂದು ಹೇಳಬೇಕಾದದ್ದು 'ಇಂದ್ರನಿಂದ ವಧಿಸಲ್ಪಡುವವನು ಸೃಷ್ಟಿಯಾಗಲಿ' ಎಂಬ ಅರ್ಥ ಬಂದುದರಿಂದ ವೃತ್ರನು ಉತ್ಪನ್ನವನಾದನು. ತ್ವಷ್ಟೃವೇ ತಯಾರಿಸಿಕೊಟ್ಟ ವಜ್ರಾಯುಧವನ್ನು ಇಂದ್ರನು ತ್ರಿತನ ಮುಖಾಂತರ ಪ್ರಯೋಗಿಸಿ ವೃತ್ರನನ್ನು ಸಂಹರಿಸಿದನು. ಇದರ ಫಲವಾಗಿ ಎರಡು ಬ್ರಹ್ಮಹತ್ಯಾದೋಷಗಳ ಫಲವನ್ನು ಇಂದ್ರನು ಹೊರಬೇಕಾಯಿತು.

ಸಂಗ್ರಹವಾಗಿ ಇದು ಇಲ್ಲಿಯ ಆಖ್ಯಾಯಿಕೆ. ಇದರಲ್ಲಿ ಆಧ್ಯಾತ್ಮಿಕ ಪರವಾದ ರಹಸ್ಯವು ಅಡಗಿದೆ. ಈ ರೀತಿಯ ರಹಸ್ಯಗಳನ್ನು ಅರಿಯುವುದೇ ವೇದಾಧ್ಯಯನದ ಮೂಲಗುರಿ.

ಇಲ್ಲಿ ಹೇಳಲಾಗಿರುವ ತ್ವಷ್ಟೃವು ವಿಶ್ವಕರ್ಮ ಸ್ವರೂಪನೇ. ಆತನನ್ನು ತ್ವಷ್ಟೃವಿಶ್ವಕರ್ಮನೆಂದೇ ಕರೆಯುತ್ತಾರೆ. ಆದ್ದರಿಂದ ಆತನು ಸಚ್ಚಿದಾನಂದ ಸ್ವರೂಪಿಯಾದ ಅಖಂಡ ಪರಬ್ರಹ್ಮನೇ ಹೊರತು ಬೇರೆಯಲ್ಲ. ಆ ಬ್ರಹ್ಮನಿಂದಲೇ ಪ್ರಕೃತಿಯು ಅವತರಿಸಿದೆ. ಇದನ್ನೇ ನಾಸದೀಯ ಸೂಕ್ತವು (ಋ 10 : 129 ) ತಮಸ್ಸು ಎಂದು ವಿಶ್ವಕರ್ಮ ಸೂಕ್ತವು (ಋ 10 : 81 ಮತ್ತು 82) *ನೀಹಾರ* (ಮಂಜು) ಎಂದು ಹೇಳಿವೆ. ಜಗತ್ ಕಾರಣವಾಗಿರುವ ಪ್ರಕೃತಿ ಎಂಬುದು ಸತ್ವ–ರಜಸ್ಸು – ತಮಸ್ಸು ಎಂಬ ಮೂರುಗುಣಗಳು ಉಳ್ಳದ್ದು ಎಂಬುದಾಗಿ ಸಾಂಖ್ಯ ವೇದಾಂತ ಶಾಸ್ತ್ರಗಳ ನಿರ್ಣಯ. ವಿಶ್ವರೂಪನೆಂದರೆ ಜಗತ್ಕಾರಣವಾಗಿರುವ ಇಂತಹ ಪ್ರಕೃತಿಯೇ. ವಿಶ್ವರೂಪನ ಮೂರು ತಲೆಗಳು ತ್ರಿಗುಣಗಳಾದ ಸತ್ತ್ವ–ರಜಸ್ಸು – ತಮಸ್ಸುಗಳ ಪ್ರತೀಕವೇ. ಎಂದರೆ ಈ ಗುಣಗಳ ಸಂಕೇತಗಳೇ. ಇದಕ್ಕಾಗಿಯೇ ಆ ಶಿರಗಳಲ್ಲಿ ಸತ್ತ್ವಗುಣ ಶಿರವು ಸೋಮ ಪಾನವನ್ನು ಮಾಡುತ್ತಿತ್ತು ಎಂದು ಹೇಳಿರುವುದು. ಸೋಮ ಎಂದರೆ ಅಮೃತ. ಇದು ದೇವತಾ ಸೃಷ್ಟಿಯ ಪ್ರತೀಕ. ತಮೋಗುಣವು ರಾಕ್ಷಸ; ಪೈಶಾಚಿಕ. ಜಡಪ್ರಕೃತಿಗೆ ಚಿಹ್ನೆ. ಆದ್ದರಿಂದಲೇ ಆ ಶಿರಸ್ಸು ಸುರಾಪಾನ ಮಾಡುತ್ತಿತ್ತು ಎಂದು ಹೇಳಿ ಅಧಮ ಜೀವ ಸೃಷ್ಟಿಯನ್ನು ಸೂಚಿಸುತ್ತದೆ. ಇನ್ನು ರಜೋ ಗುಣಪ್ರಧಾನವಾದ ಶಿರವು ಅನ್ನ ಭಕ್ಷಣವನ್ನು ಮಾಡುತ್ತಾ ಮಾನವ ಸೃಷ್ಟಿಯನ್ನು ತಿಳಿಸುತ್ತದೆ. ವಿಶ್ವರೂಪಾಚಾರ್ಯನ ಸಂಕೇತವು ದೇವ – ಮಾನವ– ರಾಕ್ಷಸ–ತಿರ್ಯಕ್– ಜಡಾದಿಗಳನ್ನು ಸೂಚಿಸುತ್ತದೆ. ವಿಶ್ವರೂಪಾಚಾರ್ಯನು ತ್ರಿಗುಣಾತ್ಮಕವಾದ

---

1. ವಿಶ್ವರೂಪೋ ವೈ ತ್ವಾಷ್ಟ್ರಃ ಪುರೋಹಿತೋ ದೇವಾನಾ ಮಾಸೀತ್ ಸ್ವಸ್ತಿಯೋಽಸುರಾಣಾಂ । ತಸ್ಯ ತ್ರೀಣಿ ಶೀ ರ್ಷಾಣ್ಯಾಸನ್ ಯತ್ಸೋಮಪಾನಗ್ಂ ತ್ಸುರಾಪಾನ ಮನ್ನಾದಂ ಸ ಪ್ರತ್ಯಕ್ಷಂ ದೇವೇಭ್ಯೋ ಭಾಗ ಮವದ ತ್ಪರೋಕ್ಷ ಮಸುರೇಭ್ಯಃ ಸರ್ವಸ್ಮೈ ವೈ ಪ್ರತ್ಯಕ್ಷಂ ಭಾಗಂ ವದಂತಿ ಯಸ್ಮಾ ಏವ ಪರೋಕ್ಷಂ ವದಂತಿ ತಸ್ಯ ಭಾಗ ಉದಿತ । ಸ್ತಸ್ಮಾದಿಂದ್ರೋಽಬಿಭೇದೀದೃಜ್ಞೈ ರಾಷ್ಟ್ರಂ ವಿಪರ್ಯಾವರ್ತಯತೀತಿ. ತಸ್ಯವಜ್ರ ಮಾದಾಯ ಶೀ ರ್ಷಾಣ್ಯಚ್ಛಿನದ್ಯತ್ಸೋಮಪಾನ ಮಾಸೀತ್ಸ ಕಪಿಂಜಲೋಽಭವ ದ್ಯತ್ಸುರಾಪಾನಗ್ಂ ಸಕಲವಿಂಕೋ ಯದನ್ನಾದನಗ್ಂ ಸ ತಿತ್ತಿರಿ ಸ್ತಸ್ಯಾಂಜಲಿನಾ ಬ್ರಹ್ಮಹತ್ಯಾ ಮುಪಗೃಹ್ಣಾತ್ ॥ – ಕೃಷ್ಣಯಜುರ್ವೇದ, ಕಾಂ 2 : ಪ್ರ 5 : ಅನು ।

ಪ್ರಕೃತಿಗೆ ತಿರ್ಯಗ್ವಾದಿಗಳ ಸೃಷ್ಟಿಗೆ ಪ್ರತೀಕವೆಂಬುದು ಆಧ್ಯಾತ್ಮಿಕ ರಹಸ್ಯ ಆದ್ದರಿಂದ ಜಗತ್ತಿನಲ್ಲಿ ನಾನಾ ಬಗೆಯ ರೂಪಗಳು, ಜೀವಿಗಳು ಪ್ರಕೃತಿಯಲ್ಲಿ ಇರುವುದರಿಂದ ಅದಕ್ಕೆ ವಿಶ್ವರೂಪ ಎಂಬುದು ಸಾರ್ಥಕ ನಾಮವಾಗಿರುತ್ತದೆ.

ತ್ವಷ್ಟ ವಿಶ್ವಕರ್ಮನು **ಏಕಂ ಸತ್** ಎಂದು ಹೇಳಿಸಿಕೊಳ್ಳಲು ಅರ್ಹವಾಗಿರುವ ಪರಬ್ರಹ್ಮವೇ. ಪ್ರಕೃತಿಯು ಸಹಜವಾಗಿ ಸತ್ತ್ವ–ರಜಸ್–ತಮೋಗುಣಗಳನ್ನು ಅಭಿಮಾನಿಸಿ ಅಲ್ಪ ವಿಷಯಗಳಿಗಾಗಿ ಓಡಾಟವನ್ನು ನಡೆಸುತ್ತಿರುತ್ತದೆ. ಇದರ ಸೂಚನೆಯಾಗಿಯೆ ದೇವತೆಗಳಿಗೆ ಪ್ರತ್ಯಕ್ಷವಾಗಿ, ಅಸುರರಿಗೆ ಪರೋಕ್ಷವಾಗಿ ಹವಿರ್ಭಾಗವನ್ನು ವಿಶ್ವರೂಪಾಚಾರ್ಯ ಅರ್ಪಿಸುತ್ತಿದ್ದನೆಂಬುದನ್ನು ಹೇಳಿದೆ. ದೇವ–ಅಸುರರ ಮಧ್ಯೆ ಐಕ್ಯಮತ್ಯವನ್ನುಂಟು ಮಾಡಬೇಕೆಂದು ಆತನ ಆಶಯ. ಈ ಪ್ರಯತ್ನವು ದೇವೇಂದ್ರನಿಗೆ ಒಪ್ಪಿಗೆಯಾಗಲಿಲ್ಲ. ಆದ್ದರಿಂದಲೇ ವಿಶ್ವರೂಪಾಚಾರ್ಯನ ಹತ್ಯೆಗೆ ಕೈಹಾಕಿದ.

ಇದು ಒಂದು ಬಗೆಯ ಅರ್ಥ. ಪಿಂಡಾಂಡದ ಸಂದರ್ಭದಲ್ಲಿ ಈ ಆಖ್ಯಾಯಿಕೆಯ ಪರಮಾರ್ಥವನ್ನು ಇನ್ನೊಂದು ಬಗೆಯಾಗಿ ಹೇಳಬೇಕು. **ತ್ರಿಯಂಬಕಂ ಯಜಾಮಹೇ** ಎಂಬ ಮಂತ್ರದಲ್ಲಿ ತ್ರಿಯಂಬಕಂ ಎಂಬ ಶಬ್ದಕ್ಕೆ ಮೂರು ಶರೀರಗಳು ಇರುವ ಆತ್ಮಸ್ವರೂಪಿ ಎಂಬುದಾಗಿಯೂ ವಿಶೇಷವಾದ ಒಂದು ಅರ್ಥ ಉಂಟು. ಹಾಗೆಯೇ **ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿದಧೇ ಪದಮ್** ಎಂಬ ಮಂತ್ರಕ್ಕೆ ವಿಷ್ಣು ಸ್ವರೂಪಿಯಾದ ಜೀವನು ಮೂರು ಸ್ಥಾನಗಳನ್ನು ಎಂದರೆ ಮೂರು ದೇಹಗಳನ್ನು ಪ್ರವೇಶಿಸಿದ ಎಂದು ಹೇಳುವಂತೆಯೇ, ತ್ರಿಶಿರನಾದ ವಿಶ್ವರೂಪಾಚಾರ್ಯನು ಸ್ಥೂಲ, ಸೂಕ್ಷ್ಮ, ಕಾರಣ ರೂಪವಾದ ಮೂರು ದೇಹಗಳುಳ್ಳ ಆತ್ಮನು ಎಂಬುದನ್ನು ಅರ್ಥವಾಗಿ ಸ್ವೀಕರಿಸಬೇಕು. ಈ ಸಂದರ್ಭದಲ್ಲಿ ಕಾರಣ ದೇಹವು ಸತ್ತ್ವಗುಣಕ್ಕೆ, ಸೂಕ್ಷ್ಮದೇಹವು ರಜೋಗುಣಕ್ಕೆ, ಸ್ಥೂಲ ದೇಹವು ತಮೋಗುಣಕ್ಕೆ ಪ್ರತೀಕಗಳಾಗಿರುತ್ತವೆ. ಈ ಮೂರು ದೇಹಗಳುಳ್ಳ ಆತ್ಮನೇ (ಜೀವನೇ) ವಿಶ್ವರೂಪ ಎಂಬುದು ಇಲ್ಲಿಯ ಅರ್ಥ. ಇದಕ್ಕೆ ವಿಶ್ವಕರ್ಮ ಸೂಕ್ತದ **ಯಾ ತೇ ಧಾಮಾನಿ ಪರಮಾಣಿ ಯಾವಮಾ ಯಾ ಮಧ್ಯಮಾ** ಎಂಬ ಮಂತ್ರವೇ ಆಧಾರವಾಗಿರುತ್ತದೆ. ಸ್ಥೂಲ–ಸೂಕ್ಷ್ಮ –ಕಾರಣ ದೇಹಗಳನ್ನು ಈ ಮಂತ್ರದ ಅಧಮ ಮಧ್ಯಮ – ಪರಮ – ಧಾಮಗಳೆಂದು ನಾವು ಅಂಗೀಕರಿಸಬೇಕು. ಈ ಸಂಕೇತದಲ್ಲಿ ವಿಶ್ವರೂಪನೆಂಬ ಆತ್ಮನೇ ಇಂದ್ರನಾಗಿ ಮೂರು ದೇಹಗಳನ್ನು ಭೇದಿಸಿ ಮುಕ್ತನಾಗಲು ಯತ್ನಿಸಿದನೆಂಬುದಾಗಿ ನಾವು ಗ್ರಹಿಸಬೇಕು. ಪಿಂಡಾಂಡದಲ್ಲಿ ಇರುವ ಪ್ರತಿಜೀವನಿಗೂ ಅನ್ವಯವಾಗುವ ಶರೀರ ಸಂಬಂಧದಿಂದ ಉಂಟಾಗುವ ಸಂಸಾರವನ್ನು ತ್ಯಾಗ ಮಾಡುವುದರಿಂದ, ಅಥವಾ ಅವನ್ನು ತನ್ನಲ್ಲಿ ಲೀನ ಮಾಡಿಕೊಳ್ಳುವುದರಿಂದ ಉಂಟಾಗುವ ಬ್ರಹ್ಮೀಭೂತ ಸ್ಥಿತಿಯನ್ನು ಸೂಚಿಸುತ್ತದೆ. ತಪೋನಿಶಿತವಾದ ಆಧ್ಯಾತ್ಮಿಕ ದೃಷ್ಟಿಯಿಂದ ನೋಡಿದಾಗ ಇಂತಹ ಹಲವು ರಹಸ್ಯಗಳು ಕಾಣಿಸುತ್ತವೆ.

ಇಂದ್ರನು ಪರಮಾರ್ಥ ದರ್ಶನವನ್ನು ಬಯಸುವ ತತ್ತ್ವ ಸಾಧಕನಾದಾಗ ಪ್ರಕೃತಿಯು (ವಿಶ್ವರೂಪಾಚಾರ್ಯನು) ತನ್ನ ಬಂಧುಗಳನ್ನು ಆದರಿಸುವುದನ್ನು ಸಹಿಸಲಾರದೆ ತತ್ತ್ವ ಸಾಕ್ಷಾತ್ಕಾರೇಚ್ಛೆಯಿಂದ ಪ್ರಕೃತಿಯನ್ನು ಮಟ್ಟ ಹಾಕಲೆಂದೇ ಯತ್ನಿಸಿದನೆಂದು ಸಾಧಕರಾದವರು ಗ್ರಹಿಸಬೇಕು. ಈ ರಹಸ್ಯದಿಂದ ಸಾಧಕನು ಪ್ರಕೃತಿಯ ಮೇಲೆ ವಿಜಯಾಭಿಲಾಷೆ ಮತ್ತು ಅವನ ವಿಜಯವನ್ನು ಸೂಚಿಸುತ್ತದೆ. ಇದನ್ನೇ ಇಂದ್ರ – ವಿಶ್ವರೂಪ ಆಚಾರ್ಯರ ವೈರವಾಗಿ ಸೂಚಿತವಾಗಿದೆ. ಕೊನೆಗೆ ಸಾಧಕನೇ (ಆತ್ಮನೇ ಅಥವಾ ಇಂದ್ರನೇ) ಪ್ರಕೃತಿಯನ್ನು ಗೆದ್ದು (ವಿಶ್ವರೂಪನನ್ನು ಸಂಹರಿಸಿ) ಆತ್ಮ ಸಾಕ್ಷಾತ್ಕಾರ ರೂಪವಾದ ವಿಜಯವನ್ನು ಸಾಧಿಸಿದನೆಂಬುದು ಗೊತ್ತಾಗುತ್ತದೆ. ಆದರೆ ಈ ಸಾಧನೆಗಾಗಿ ಇಂದ್ರನು ಅನೇಕ ಕಷ್ಟ–ನಷ್ಟಗಳನ್ನು ಅನುಭವಿಸಿದ್ದು ಮಾತ್ರವಲ್ಲ ಬ್ರಹ್ಮಹತ್ಯಾ ಪಾತಕದಂತಹ ತೀವ್ರ ಸ್ವರೂಪದ ಪಾಪದ ಫಲಗಳನ್ನೂ ಮಡಿಲಿಗೆ ಹಾಕಿಕೊಳ್ಳಬೇಕಾಯಿತು. ಆತ್ಮ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸುತ್ತಿರುವ ಮಹನೀಯರು ಅನೇಕರು ಪ್ರಕೃತಿಗೆ ಸಂಬಂಧಿಸಿರುವಂತೆ ಹಲವು ನಷ್ಟಗಳನ್ನು ಅನುಭವಿಸುತ್ತಿರುವುದನ್ನು ನಾವು ನೋಡುತ್ತಲೇ ಇದ್ದೇವೆ.

ಇಂತಹ ಪರಮ ರಹಸ್ಯಗಳನ್ನು ತನ್ನಲ್ಲಿ ಅಡಗಿಸಿಕೊಂಡಿರುವ ಈ ಆಖ್ಯಾಯಿಕೆಯು, ಜಗತ್ತಿನ ಕಥೆಯೇ! ಆದ್ದರಿಂದಲೇ ಈ ಕಥೆಯನ್ನು ಎಲ್ಲಾ ಪುರಾಣಗಳಲ್ಲೂ ಬಗೆಬಗೆಯಾಗಿ ಹೇಳಿರುವುದು.

ಭಗವದ್ಗೀತೆಯು[2] ಈ ಕಥಾವೃತ್ತಾಂತವನ್ನು ದೃಢೀಕರಿಸುತ್ತಾ ಈ ರೀತಿಯಾಗಿ ಹೇಳಿದೆ : ಸತ್ವ ರಜಸ್ಸು ತಮಸ್ಸುಗಳೆಂಬ ಮೂರು ಗುಣಗಳು ಜನ್ಮ – ಜರಾ – ಮೃತ್ಯು ರೂಪಿಯಾದ ಸಂಸಾರಕ್ಕೆ ಕಾರಣವಾಗಿರುವವು. ಆ ಸಂಸಾರದಿಂದ ಹೊರಬರಬೇಕೆಂದು ಬಯಸುವ ಮನುಷ್ಯನು ಈ ಮೂರು ಗುಣಗಳನ್ನು ದಾಟಿ, ಹುಟ್ಟಿಲ್ಲದ ಎಂದರೆ ಶರೀರವಿಲ್ಲದ ಅಮೃತತತ್ತ್ವವನ್ನು ಗಳಿಸಬೇಕು.

ತತ್ತ್ವ ಸಾಧಕನಾಗಿರುವವನೇ ಇಂದ್ರ ರೂಪಿಯಾಗಿ ಮೂರು ಶಿರಸ್ಸುಗಳನ್ನು ಕತ್ತರಿಸಿದ್ದರ ಸಾಂಕೇತಿಕ ಅರ್ಥವು ಇದೇ. ಆದರೆ ಇಂತಹ ಪರಮಾರ್ಥಗಳು, ರಹಸ್ಯಾರ್ಥಗಳು ವೇದಗಳಲ್ಲಿ ಉಂಟೇ ಎಂಬ ಸಂದೇಹವು ಸಾಧಾರಣ ವಾಚಕರಿಗೆ ಉಂಟಾಗುವ ಸಾಧ್ಯತೆ ಇದೆ. ಈ ರೀತಿಯ ವಿಶೇಷಾರ್ಥಗಳು ಇಲ್ಲವೆಂದರೆ ಅದನ್ನು ವೇದವೆಂದು ಕರೆಯುವುದೇ ತಪ್ಪಾಗುತ್ತದೆ. ಮನುಷ್ಯನಿಗೆ ಉಪಕಾರವನ್ನುಂಟು ಮಾಡುವ ಬಗೆಬಗೆಯ ಅರ್ಥಗಳನ್ನು ತೋರುವುದೇ ವೇದ ಪುರುಷನ ಹೃದಯ. ಆದ್ದರಿಂದಲೇ ವಾಕ್ಕನ್ನು *ಒಂದು ವೇದ ಮಂತ್ರದಲ್ಲಿ* ಕಾಮಧೇನು ಎಂದು ಹೇಳಿದೆ. ಸಾಮಾನ್ಯ – ವಾಕ್ಕೇ ಕಾಮಧೇನುವಾಗಿದ್ದರೆ ವೇದ ವಾಣಿಯು ಮುಕ್ತಿ ಸೋಪಾನ ಪಂಕ್ತಿಯಾಗುವುದರಲ್ಲಿ ಅನುಮಾನ ಇರಕೂಡದು.

ಈ ಮಂತ್ರವನ್ನು ಕೇಳಿ –

**ದೇವೀಂವಾಚ ಮಜಯಂತ ದೇವಾಃ ತಾಂ ವಿಶ್ವರೂಪಾಃ ಪಶವೋ ವದಂತಿ ।**
**ಸಾನೋ ಮಂದ್ರೇಷ ಮೂರ್ಜಂ ದುಹಾನಾ ಧೇನುರ್ವಾ ಗಸ್ಮಾನುಪಸುಷ್ಟುತೈತು ॥**

---

2. ಗುಣಾನೇತಾನತೀತ್ಯತ್ರೀನ್ ದೇಹೀ ದೇಹ ಸಮುದ್ಭವಾನ್ ।
ಜನ್ಮ ಮೃತ್ಯು ಜರಾದುಃಖೈರ್ವಿಮುಕ್ತೋಽಮೃತ ಮಶ್ನುತೇ ॥
– ಭಗವದ್ಗೀತೆ 14 : 20

[ಪ್ರಕಾಶಿಸುತ್ತಿರುವಂತಹ ಯಾವ ವಾಕ್ಕನ್ನು ದೇವತೆಗಳು ಉಂಟೆಂದು ಗ್ರಹಿಸಿದ್ದಾರೆಯೋ ಅಂತಹ ವಾಕ್ಕನ್ನು ನಾನಾ ಬಗೆಯ ಪ್ರಾಣಿಗಳು ನುಡಿಯುತ್ತಿವೆ. ಅಂತಹ ವಾಗ್ದೇವಿಯು ನಮ್ಮಿಂದ ಸ್ತುತಿತಳಾಗಿ ಸಂತೃಪ್ತಳಾದರೆ ಕಾಮಧೇನುವಾಗಿ ನಮಗೆ ಇಹಕ್ಕೆ ಅತ್ಯಾವಶ್ಯಕವಾದ ಅನ್ನಾದಿಗಳನ್ನು, ಪರಕ್ಕೆ ಬೇಕಾಗಿರುವ ಊರ್ಜಗಳೆಂಬ ರಸಾದಿಗಳನ್ನು ದಯಪಾಲಿಸಿ ಮೋಕ್ಷವನ್ನು ಗಳಿಸಿಕೊಡವ ಶಕ್ತಿಯನ್ನು ದಯಪಾಲಿಸಿ ಉಭಯ ತಾರಕವಾದ ಅಮೃತವನ್ನು ದಯಪಾಲಿಸ ಬಲ್ಲದು].

ಇಲ್ಲಿ ವಾಕ್ಕನ್ನು ಕಾಮಧೇನುವಿನೊಂದಿಗೆ ಹೋಲಿಸಿ ಅದು ದಯಪಾಲಿಸಬಲ್ಲ ಪ್ರಯೋಜನಗಳ ಬಗ್ಗೆ ಹೇಳಿದೆ. ಇನ್ನು ಕಾಮಧೇನುವಿಗೂ ಮಿಗಿಲಾದ ವೇದ ವಾಕ್ಕು ದಯಪಾಲಿಸಲಾರದ ಬೇರೆಯ ಯಾವ ಪ್ರಯೋಜನವು ತಾನೇ ಇರಬಲ್ಲದು? ಆದರೆ ಇಂತಹ ವಿಶೇಷಾರ್ಥಗಳು ವೇದವನ್ನು ಓದಿದವರಿಗೆಲ್ಲಾ ತಿಳಿಯುವುದು ಸಾಧ್ಯವಿಲ್ಲ. ಅದು ಕೇವಲ ಪಕ್ವಗೊಂಡ ತತ್ತ್ವಸಾಧಕರಿಗೆ ಮಾತ್ರವೇ ಸ್ಫುರಿಸುತ್ತದೆ ಎಂಬುದನ್ನು ಕೂಡ ವೇದವೇ ಈ ಮಂತ್ರದಲ್ಲಿ ಹೇಳಿದೆ.

**ಉತ ತ್ವಃ ಪಶ್ಯನ್ನದದರ್ಶ ವಾಚ ಮುತತ್ವಃ ಶೃಣ್ವನ್ನ ಶೃಣೋತ್ಯೇನಾಂ ।**
**ಉತೋತ್ವಸ್ಮೈ ತನ್ವಂ ವಿಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾ ः ॥**[3]

[ಸಾಮಾನ್ಯನೊಬ್ಬನು ನೋಡುತ್ತಿದ್ದರೂ ಈ ವೇದ ವಾಕ್ ಕಾಣಿಸುದಿಲ್ಲ. ಇನ್ನೊಬ್ಬನು ಕೇಳುತ್ತಿದ್ದರು ಅವನಿಗೆ ಕೇಳಿಸುವುದೇ ಇಲ್ಲ. ಅರ್ಹನೂ, ವಿದ್ವಾಂಸನೂ ಅಲ್ಲದವರಿಗೆ ವೇದವಾಣಿಯು ತನ್ನನ್ನು ತಾನು ತೋರಿಸಿಕೊಳ್ಳುವುದಿಲ್ಲ. ತಪೋ ವಿದ್ಯೆಗಳು ಉಳ್ಳವನಿಗೆ ಮಾತ್ರವೇ ವೇದ ವಾಣಿಯು ತನ್ನನ್ನು ತಾನೇ ತೋರಿಸಿಕೊಳ್ಳುತ್ತಾಳೆ. ಒಳ್ಳೆಯ ವಸ್ತ್ರಾದಿಗಳಿಂದ ಅಲಂಕೃತಳಾಗಿರುವ, ಸತ್ಸಂತಾನವನ್ನು ಕೋರುವ ಪತ್ನಿಯು ಸಂಭೋಗಾರ್ಥಿಯಾದ ತನ್ನ ಪತಿಗಾಗಿ ತನ್ನ ದೇಹವನ್ನು ತನ್ನ ಶರೀರಾವಯಗಳನ್ನು ರಿಕ್ತಗೊಳಿಸಿ ತೋರುವಂತೆ ವೇದವಾಣಿಯು ಅರ್ಹತೆಯುಳ್ಳವನಿಗೆ ಮಾತ್ರವೇ ತನ್ನಲ್ಲಿಯ ಅಂತರ್ಭಾವಗಳನ್ನು ತೋರಿಸುತ್ತದೆ.]

ತಪಶ್ಶಾಲಿಯಾದ ಜಿಜ್ಞಾಸುವಿಗೆ ಮಾತ್ರವೇ ವೇದಾರ್ಥವು ತಿಳಿಯುತ್ತದೆ. **(ತಪಸಾ ಬ್ರಹ್ಮವಿಜಿಜ್ಞಾಸಸ್ವ)**. ಈ ವೇದಮಂತ್ರವನ್ನು ಅನುಸರಿಸಿಯೇ ಕಠವಲ್ಲಿಯು ಇದೇ ಅರ್ಥವನ್ನು ಹೀಗೆ ಹೇಳಿದೆ – **ಯ ಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ।**

ಈ ಮಂತ್ರದಲ್ಲಿ **ತ್ವಸ್ಮೈ** (ಯಾರೋ ಒಬ್ಬನಿಗೆ ಮಾತ್ರವೇ) ಎಂದು ಹೇಳಿದ್ದು ಅಂತಹವನ ಗುಣ – ಸಾಧನೆ – ಲಕ್ಷಣಗಳನ್ನು ಇಲ್ಲಿ ವಿವರಿಸಿ ಹೇಳಿಲ್ಲ ಎಂಬುದನ್ನು ನಾವು ಗುರ್ತಿಸಬಹುದು. ಬೇರೊಂದು ಕಡೆ *ಆ ಯಾರೋ ಒಬ್ಬನ ಗುಣವನ್ನು* ವೇದ ಮಂತ್ರವೇ ವಿವರಿಸಿದೆ. ಅದನ್ನು ಕೇಳಿ –

**ಸಕ್ತು ಮಿವ ತಿತುನಾ ಪುನಸ್ತೋ ಯತ್ರ ಧೀರಾ ಮನಸಾ ಪುನಸ್ತೋ**
**ಅತ್ರಾ ಸಖಾಯ ಸ್ಸಖ್ಯಾನಿ ಜನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥**[4]

---

3. ಋಗ್ವೇದ 10 : 71 : 4
4. ಋಗ್ವೇದ 10 : 71 : 2

[ಯಾವ ಸಮಯದಲ್ಲಿ ಬುದ್ಧಿಯನ್ನು ವಶಪಡಿಸಿಕೊಂಡ ವಿದ್ವಾಂಸರು ಜರಡಿಯಿಂದ ಹುರಿಹಿಟ್ಟನ್ನು ಶುದ್ಧಿ ಗೊಳಿಸುವವರಂತೆ ಪ್ರಜ್ಞಾಯುಕ್ತವಾದ ಮನಸ್ಸಿನಿಂದ ವಾಕ್ಕನ್ನು ಪವಿತ್ರಗೊಳಿಸಿ ಸೃಷ್ಟಿಸುತ್ತಾರೆಯೋ ಅಲ್ಲಿ (ಆಗ) ಆ ವಾಕ್ಕಿನೊಂದಿಗೆ ಸ್ನೇಹ ಉಳ್ಳವರಾಗಿ ಆ ಸ್ನೇಹಿತರನ್ನು ಚನ್ನಾಗಿ ತಿಳಿಯುತ್ತಾರೆ. ಆ ವಾಕ್ಕಿನ ಮೂಲದೊಂದಿಗೆ ಸ್ನೇಹ ಭಾವವನ್ನು ಬೆಳೆಸಿಕೊಂಡು ಆ ಮಾತುಗಳಿಂದ ಲಾಭವನ್ನು ಗಳಿಸಿಕೊಳ್ಳಬಲ್ಲರು. ಇಂತಹವರ ಮಾತಿನಲ್ಲಿ ಮಂಗಳವನ್ನುಂಟು ಮಾಡುವ ಲಕ್ಷ್ಮೀಯು ಇರುತ್ತಾಳೆ ].

ಹುರಿಹಿಟ್ಟನ್ನು ಜರಡಿ ಹಿಡಿದು ಶೋಧಿಸಿ ಶುದ್ಧೀಕರಿಸಿದಾಗ ಸಾರ ತುಂಬಿಕೊಂಡಿರುವಂತೆಯೇ ಪರಿಶುದ್ಧ ಬುದ್ಧಿಯುಳ್ಳವರು ದೋಷರಹಿತವಾದ ವಾಕ್ಕುಗಳನ್ನು ಮನಸ್ಸಿ ಪ್ರಭಾವದಿಂದ ಸೃಷ್ಟಿಸಿ ಪ್ರಜೆಗಳಿಗೆ ಶುಭವನ್ನುಂಟು ಮಾಡಬಲ್ಲರು. ಇಂತಹವರೇ ನಿಜವಾಗಿಯೂ ಧೀರರು. ಇವರನ್ನೇ ಉಪನಿಷತ್ತು **ಕಶ್ಚಿದ್ಧೀರಃ ಪ್ರತ್ಯಗಾತ್ಮಾನ ಮೈಕ್ಷತ್** ಎಂದು ಹೇಳಿದೆ. ಇವರೇ ಆ ಪರಮಾತ್ಮನ ಸ್ಥಾನವನ್ನು ಬಲ್ಲವರು (**ತಸ್ಯಧೀರಾः ಪರಿಜಾನಂತಿ ಯೋನಿಮ್** ।) ಎಂದು ಪುರುಷ ಸೂಕ್ತವು ಹೇಳಿದೆ. ಇಂತಹ ಧೀರಲ್ಲದವರಿಗೆ ಪರಾವಾಕ್ತತ್ವವನ್ನು ಗ್ರಹಿಸುವುದು ಸಾಧ್ಯವಾಗುವುದಿಲ್ಲ. ಅವರ ಮಾತಿನಲ್ಲಿಯೇ ಲಕ್ಷ್ಮಿಯು ನಿವಾಸವನ್ನು ಏರ್ಪಡಿಸಿಕೊಂಡು ಇರುತ್ತಾಳೆ. ಎಂದರೆ ಅವರೇ ವೇದವಿಜ್ಞಾನ ವೇತ್ತರು. ಅವರ ಆಶೀರ್ವಾದವಾಗಲಿ, ಶಾಪವಾಗಲಿ ತಪ್ಪದೆ ಫಲಿಸುತ್ತದೆ ಎಂಬುದನ್ನು ನಾವು ತಿಳಿಯಬೇಕು.

ಈ ವಿಶ್ಲೇಷಣೆಯ ಪ್ರಾರಂಭದಲ್ಲಿಯೇ ಇದು ವೇದದಲ್ಲಿರುವ ಆಖ್ಯಾಯಿಕೆ ಎಂದು ಹೇಳಿದೆ. ಆಖ್ಯಾಯಿಕೆ ಎಂದರೆ ಸತ್ಯಕತೆ ಎಂಬ ಅರ್ಥವನ್ನೂ ತಿಳಿಸಿದ್ದೇವೆ. ವಿಶ್ವರೂಪಾಚಾರ್ಯರು ಇರಲಿಲ್ಲ. ಈ ಕಥೆಯು ಚಾರಿತ್ರಿಕ ಸತ್ಯವಲ್ಲ ಎಂದು ಹೇಳುವುದು ಸಾಧ್ಯವಾಗುವುದಿಲ್ಲ. ತ್ವಷ್ಟೃಪುತ್ರನಾದ ವಿಶ್ವರೂಪಾಚಾರ್ಯನು ದರ್ಶಿಸಿರುವ ಸೂಕ್ತಗಳು, ಮಂತ್ರಗಳು ಋಗ್ವೇದದಲ್ಲಿ ದೊರೆಯುತ್ತವೆ. ಋಗ್ವೇದದ ಹತ್ತನೆಯ ಮಂಡಲದ ಒಂಬತ್ತನೆಯ ಸೂಕ್ತವು ಆತನದೇ ನಾವು ನಿತ್ಯವೂ ಸಂಧ್ಯಾವಂದನೆಯಲ್ಲಿ ಪಠಿಸುವ **ಆಪೋ ಹಿಷ್ಠಾ ಮಯೋಭುವಃ ತಾ ನ ಊರ್ಜೇ ದಧಾತನ....** ಮುಂತಾದ ಮಂತ್ರಗಳ ದ್ರಷ್ಟಾರನು ಆತನೇ. ಅಲ್ಲಿ ತ್ರಿಶಿರಸ್ ತ್ವಾಷ್ಟ್ರಾ ಎಂಬುದಾಗಿ ಋಷಿನಾಮವನ್ನು ಹೇಳಿದೆ. ತ್ವಷ್ಟೃವಿನ ಮಗನಾದ ತ್ರಿಶಿರಸ್ (ಮೂರು ತಲೆಯುಳ್ಳಾತನು) ಎಂಬುದು ಈ ಶಬ್ದದ ಅರ್ಥ. ಆತನೇ ವಿಶ್ವರೂಪಾ ಚಾರ್ಯನಲ್ಲವೇ?

**ಬ್ರಹ್ಮಪುರಾಣ**ದಲ್ಲಿ **ಭದ್ರ ತೀರ್ಥ ವರ್ಣನಂ** ಎಂಬ ಭಾಗದಲ್ಲಿ ವಿಶ್ವರೂಪಾಚಾರ್ಯರ ಸಂತತಿಯ ಬಗ್ಗೆ ವಿವರವಿದೆ. ಅವರೆಲ್ಲರೂ ಇಂದಿನ ಶಿಲ್ಪಿಬ್ರಾಹ್ಮಣರ ಗೋತ್ರಪುರುಷರಾಗಿದ್ದಾರೆ. ವೇದವು ಚಾರಿತ್ರಿಕ ಸತ್ಯಗಳನ್ನು ಹೇಳುವುದಿಲ್ಲ ಎಂದು ಭಾವಿಸಬಾರದು. ಮನುಷ್ಯನ ಬದುಕಿನ ಅಭ್ಯುದಯಕ್ಕೆ ಬೇಕಾಗುವ ಸಕಲ ವಿಷಯಗಳನ್ನು ವೇದವು ಹೇಳಿದೆ. ಧರ್ಮ–ಅರ್ಥ–ಕಾಮ – ಮೋಕ್ಷ – ಐಶ್ವರ್ಯಾದಿಗಳಿಗೆ ಸಂಬಂಧಿಸಿರುವ ಸೃಷ್ಟಿ–ಸ್ಥಿತಿ–ಲಯ–ತಿರೋಧಾನ– ಅನುಗ್ರಹಗಳಿಗೆ ಸಂಬಂಧಿಸಿರುವ ಎಲ್ಲಾ ವಿಷಯಗಳಿಗೆ

ಸೇರಿರುವ ಸಕಲವನ್ನು ಹೇಳುವ ವೇದವು ಇತಿಹಾಸವನ್ನು ಮಾತ್ರವೇ ಬಿಡಬಲ್ಲುದೇ?

ಆದರೆ ನಮಗೆ ಈಗ ಲಭಿಸಿರುವುದು ವೇದವು ಸಮಗ್ರವಾದುದಲ್ಲ. ಪ್ರಸ್ತುತ ವೇದದಲ್ಲಿ *ಖಿಲ ಸೂಕ್ತಾನಿ* ಎಂಬ ಪರಿಶಿಷ್ಟ ಭಾಗವೇ ಇದೆ. ಇಲ್ಲಿ ಕಳೆದುಹೋಗಿವೆ ಎಂದುಕೊಂಡಿರುವ ಸೂಕ್ತಗಳ ಉಳಿದ ಭಾಗಗಳು ಮಾತ್ರವೇ ಇವೆ. ಎಂದರೆ ವೇದದಲ್ಲಿ ಕಳೆದು ಹೋಗಿರುವ ಭಾಗವುಬಹುವಾಗಿದೆ. ಆದ್ದರಿಂದ ಈಗ ಇರುವಷ್ಟೇ ವೇದವಲ್ಲ ಇನ್ನೂ ನಮಗೆ ದೊರೆಯದೆಯೇ ಕಳೆದಿರುವ ಭಾಗವು ಇದೆ. ಇಂತಾಗಿ ವೇದದ ಪೂರ್ಣ ಜ್ಞಾನವು ನಮಗೆ ಲಭಿಸಿಲ್ಲ.

ತ್ವಷ್ಟವು ತನ್ನ ಮಗನಾದ ವಿಶ್ವರೂಪಾಚಾರ್ಯನ ವಧಾನಂತರ ಒಂದು ಯಜ್ಞವನ್ನು ಮಾಡಿ ವೃತ್ರನನ್ನು ಸೃಷ್ಟಿಸಿದ. ಆ ವೃತ್ರನು ತ್ರಿಲೋಕಗಳನ್ನು ಆವರಿಸಿ ಇಂದ್ರನನ್ನು ದಂಡಿಸಲು ಪ್ರಾರಂಭಿಸಿದ. ಲೋಕ ಕಂಟಕನಾಗಿ ವರ್ತಿಸಿದ. ತ್ವಷ್ಟವನ್ನೇ ಬೇಡಿ ವಜ್ರಾಯುಧವನ್ನು ಮಾಡಿಸಿಕೊಂಡು ತ್ರಿತನ ಸಹಾಯದಿಂದ ವೃತ್ರನನ್ನು ಇಂದ್ರನು ಕೊಂದ. ಇದರಿಂದ ಇನ್ನೊಂದು ಬ್ರಹ್ಮಹತ್ಯಾದೋಷವನ್ನು ನೆತ್ತಿಯ ಮೇಲೆ ಹೊತ್ತುಕೊಂಡ. ಇದರ ವಿವರವು ಇಂತಿದೆ[5]–

ಇಂದ್ರನು ವೃತ್ರನನ್ನು ಕೊಂದನು. ಹಾಗೆ ಕೊಲ್ಲಲ್ಪಟ್ಟ ವೃತ್ರನು ಅಸುರ ಮಾಯೆಯಿಂದ ಹದಿನಾರು ಬಗೆಗಳ ಸರ್ಪಾಕಾರದ ಶರೀರವನ್ನು ಧರಿಸಿ ಇಂದ್ರನ ಹಸ್ತಪಾದ ಮುಂತಾದ ಅವಯವಗಳನ್ನು ಬಂಧಿಸಿದ. ಆಗ ಇಂದ್ರನು ಪ್ರತಿಕಾರವನ್ನು ಯೋಚಿಸಿ **ಅಗ್ನಿಸ್ತಿಗ್ಮೇನ** ಎಂಬ ಎರಡು ಮಂತ್ರಗಳಿಂದ ಅಗ್ನಿಹೋತ್ರನಿಗೆ ಆಹುತಿಗಳನ್ನು ಅರ್ಪಿಸಿದನು. ಇದರಿಂದ ಸಂತುಷ್ಟನಾದ ಅಗ್ನಿಯು ವೃತ್ರನ ಹದಿನಾರು ಶರೀರಗಳನ್ನು ನಾಶಗೊಳಿಸಿದನು. ಇದರ ತರುವಾಯ **ಯ ಇಮಾ ವಿಶ್ವಾ** ಎಂಬ ಎರಡು ಸೂಕ್ತಗಳ ವ್ಯಾಪ್ತಿಯ *ವಿಶ್ವಕರ್ಮ ಸೂಕ್ತ*ವನ್ನು ಪಡೆದುಕೊಂಡು ವೈಶ್ವಕರ್ಮಣ ಹೋಮವನ್ನು ಆಚರಿಸಿ ವೃತ್ರ ವಧೆಯಿಂದ ಗಳಿಸಿದ್ದ ಪಾಪವನ್ನು ಕಳೆದುಕೊಂಡನು. ಈ ವೈಶ್ವಕರ್ಮಣ ಹೋಮವನ್ನು ಪ್ರತಿಮಂತ್ರವನ್ನೂ ಬೇರೆ ಬೇರೆಯಾಗಿ ಹೇಳುತ್ತಾ ಹವಿಸ್ಸನ್ನು ಅರ್ಪಿಸುತ್ತಾ ಹೋಮವನ್ನು ಮಾಡಬೇಕೆ ಅಥವಾ ಒಂದೇ ಬಾರಿಗೆ ಎರಡೂ ಸೂಕ್ತಗಳನ್ನು ಪಠಿಸಿ ಒಂದೇ ಬಾರಿ ಹವಿಸ್ಸನ್ನು ಅರ್ಪಿಸುವುದೇ ಅಥವಾ ಒಂದೊಂದು ಸೂಕ್ತಕ್ಕೆ ಒಮ್ಮೊಮ್ಮೆ ಹವಿಸ್ಸರ್ಪಿಸಿ ಆಚರಿಸಿಬೇಕೆ ಎಂಬುದಾಗಿ ಪ್ರಶ್ನಿಸಲ್ಪಟ್ಟಾಗ ಇವುಗಳಲ್ಲಿ ಮೊದಲ ಕ್ರಮವೇ ಶಾಖಾಂತರ ಪಕ್ಷವಾಗಿ ಅಂಗೀಕಾರಾರ್ಹ ಎಂಬುದಾಗಿ ಹೇಳಿದೆ. ಇದರ ಆಚರಣೆಯಿಂದ ಚಿರಕಾಲದ ಪಾಪಗಳೂ ಕಳೆಯುತ್ತವೆ.

ಈ ವಾಕ್ಯಗಳಿಂದ ಇಂದ್ರನು ಬ್ರಹ್ಮಹತ್ಯಾಪಾತಕದಿಂದ ವಿಮುಕ್ತನಾಗಲು ವಿಶ್ವಕರ್ಮ ಯಜ್ಞವನ್ನು ಮಾಡಿ ಕೃತಾರ್ಥನಾದ. ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಇಂದ್ರನು ಈ ಬ್ರಹ್ಮಹತ್ಯೆಯನ್ನು ಹೊತ್ತಿದ್ದಾಗ ಭೂಲೋಕದ ನಹುಷ ಚಕ್ರವರ್ತಿಯು ಇಂದ್ರನಾಗಿದ್ದ ಎಂಬುದನ್ನು ಪುರಾಣಗಳು ವಿವರಿಸಿ ಹೇಳಿವೆ.

ಹೀಗೆ ಈ ಆಖ್ಯಾಯಿಕೆಯಲ್ಲಿ ಇತಿಹಾಸ, ಪರಂಪರೆ, ಆಧ್ಯಾತ್ಮಮಾರ್ಗ, ಮನುಷ್ಯನು ತನ್ನನ್ನು ರಕ್ಷಿಸಿಕೊಂಡು ಮಂಗಳವನ್ನು ಗಳಿಸುವ ಮಾರ್ಗ ಹೀಗೆ ಅನೇಕ ವಿವರಗಳು ಲಭಿಸುತ್ತವೆ.

* * *

---

**5, ಇಂದ್ರೋ ವೃತ್ರಮಹನ್ ತಂ ವೃತ್ರ: ಹತಃ ಷೋಡಶಭಿಬಾಗೈರಸಿನಾ ತ್ಸ ಏತಾಮಗ್ನಯೇ ನೀಕವತ ಆಹುತಿ ಮಪಶ್ಯತ್ತಾಮಜುಹೋತ್ತಸ್ಯಾಗ್ನಿ ರಸೀಕವಾನ್ ತ್ಸ್ವೇನ ಭಾಗಧೇಯೇನ ಪ್ರೀತಃ ಷೋಡಶಧಾ ವೃತ್ರಸ್ಯ ಭೋಗಾ ನಪ್ಯದಹ ದ್ವೈಶ್ವಕರ್ಮಣೇನ ಪಾಪ್ಮಮನೋ ನಿರಮುಚ್ಯತೆ ಯದಗ್ನ ಯೇಽನೀಕವತ....** (ಕೃಷ್ಣಯುಜು ಕಾಂ5 : ಪ್ರ 4 : ಅನು5)

ಇದಕ್ಕೆ ಸಾಯಣ ಭಾಷ್ಯ ಇಂತಿದೆ– ಇಂದ್ರೋಯದಾ ವೃತ್ರಂ ವಜ್ರೇಣ ಪ್ರಹತವಾಂ ಸ್ತದಾ ಸ ವೃತ್ರ ಅಸುರ ಮಾಯಯಾ ಸಹನಾ ಷೋಡಶ ಸರ್ಪಾಕಾರಾಣಿ ಶರೀರಾಣಿ ಸ್ವೀ ಚಕಾರ. ಸ್ವೀಕೃತ್ಯ ಚ ಭೋಗ ಶಬ್ದಾಭೇಧೇಯೈಸ್ತೈಸ್ಸರ್ಪಾಕಾರ ಶರೀರೈ ಸ್ತಮಿಂದ್ರಂ ಹಸ್ತಪಾದಾದ್ಯವಯವೇಷು ಬಬಂಧ. ತದಾನೀಂಸ ಇಂದ್ರಃ ಪ್ರತೀಕಾರಂ ವಿಚಾರ್ಯ ಅನಿಕೇನ ಸೈನ್ಯೆನ ಯುಕ್ತಾಯಾಗ್ನಯೇ ಏತಾಮಗ್ನಿಸ್ತಿಗ್ಮೇ ನೇತಿ ಮಂತ್ರ ದ್ವಯೇನ ಸಾಧ್ಯಾಮಾಹುತಿಂ ದತ್ವಾಹುತವಾನ್ ತತಸ್ತೋವಗ್ನಿ ರನೀಕವಾಂ ಸ್ತುತೋ ವೃತ್ರಸ್ಯ ಷೋಡಶ ಸರ್ಪಾಕಾರಾಣಿ ಶರೀರಾಣ್ಯದಹತ್ ತತ ಊರ್ಧ್ವಮೀಂದ್ರೋಯ ಇಮಾ ವಿಶ್ವೇತಿ ಸೂಕ್ತ ದ್ವಯಸಾಧ್ಯೇನ ವೈಶ್ವಕರ್ಮಣ ಮಯಂ ವೈಶ್ವಕರ್ಮಣ ಹೋಮೇನ ವೃತವಧ ಜನ್ಯಾತ್ ಪಾಪ್ಮನೋ ನಿರ್ಮುಕಃ .... ಕಿಹೋಮಃ ಪ್ರತಿಮಂತ್ರಂ ಪೃಥಕ್ಕಾರ್ಯಃ ಕಿಂವಾ ಸೂಕ್ತದ್ವಯಂ ಸಮುಚ್ಚಾರ್ಯ ಸಕೃದನುಷ್ಠೇಯಃ ಅಹೋಸ್ವಿದೇಕೈಕಂ ಸೂಕ್ತಮುಚ್ಚಾರ್ಯಾನುಷ್ಠೇಯಃ ಇತಿ। ತತ್ರ ಆದ್ಯಪಕ್ಷದ್ವಯಂ ಶಾಖಾಂತರತತ್ವೇ ನಾಂಗೀಕರೋತಿ। ಯಂ ಕಾಮಯೇತ ಚಿರಂ ಪಾಪ್ಮನೋ ನಿರ್ಮುಚ್ಯತ..... ಏಕೈಕ ಹೋಮೇನ ಶನೈಶನೈಃ ಪಾಪನಿರ್ಮುಕ್ತೋಭವತಿ, ಸರ್ವಾನುಚ್ಚಾರ್ಯೈಕ ಹೋಮೇನ ತು ತದಾನೀಮೇವ ಪಾಪನಿರ್ಮೋಕಃ ಪೃಥಕ್ ಸೂಕ್ತದ್ವಯೇಪಿ ಸಾಮರ್ಥ್ಯಂ ಪೃಥಕ್ ಸಂಪಾದಿತಂ ಭವತಿ। ಅಪಿಚ ಸೂಕ್ತದ್ವಿತ್ವಂ ಯಜಮಾನಸ್ಯ ಪ್ರತಿಷ್ಠಾಯೈ ಸಂಪದ್ಯತೇ। ತಸ್ಮಾದಯಮೇವ ಪಕ್ಷಃ ಶ್ರೇಯಾನಿತ್ಯರ್ಥಃ।

# ಕಥಾಚಿತ್ರಗಳ ಉಬ್ಬು ಶಿಲ್ಪ ಶಿಬಿರದಲ್ಲಿ ಭಾಗವಹಿಸಿದ ಶಿಲ್ಪಿಗಳು

**ಶಿಬಿರದ ಗುರುಗಳು : ಶಿಲ್ಪಿ ಶ್ರೀ ವಿ. ಸೋಮಶೇಖರ್,** ಕೇರಾಫ್ ಶ್ರೀ ಎನ್. ವೆಂಕಟೇಶ್, ನಂ. 114, ಬಾರೆ ದೊಡ್ಡಿ ಛತ್ರ, ಬಿಡದಿ ಅಂಚೆ – 562109, ರಾಮನಗರ ಜಿಲ್ಲೆ, ಮೊ. : 8105965103

1. **ಶ್ರೀ ಬೋರಯ್ಯ ಟಿ**
ಬಿನ್ ತಿಪ್ಪಯ್ಯ, ಬುದನಟ್ಟಿ ಗ್ರಾ ಮತ್ತು ಅಂಚೆ
ಚಳ್ಳಕೆರೆ ತಾ॥ ಚಿತ್ರದುರ್ಗ ಜಿಲ್ಲೆ, ಮೊ. : 9845511095

2. **ಶ್ರೀ ಶರಣ್ ಎಂ** ಕೇರಾಫ್ ಸೃಷ್ಟಿ ಶಿಲ್ಪಲೋಕ
ನಂ. 1111, ಬಿ.ಎಂ. ಬಿ.ಎಂ. ರಸ್ತೆ, ವಿನಾಯಕ ನಗರ
ರಾಮನಗರ, ಮೊ : 9844021503

3. **ಶ್ರೀ ಆರ್. ವಿಶ್ವನಾಥ** ಬಿನ್ ರಾಜಗೋಪಾಲಚಾರಿ
ಪುಲಿಒಬಿರೆಡ್ಡಿಹಳ್ಳಿ, ಜಿ.ಮಾರಂಡಹಳ್ಳಿ ಅಂಚೆ
ಮುಳಬಾಗಿಲು ತಾ॥ ಕೋಲಾರ ಜಿಲ್ಲೆ
ಮೊ. 9986377308, 9742026637

4. **ಶ್ರೀ ಸಿ. ನಾಗೇಶ್** ಕೇರಾಫ್ ಸೃಷ್ಟಿ ಶಿಲ್ಪಲೋಕ
ನಂ. 1111, ಬಿ.ಎಂ. ರಸ್ತೆ, ವಿನಾಯಕ ನಗರ
ರಾಮನಗರ, ಮೊ : 9902253855

5. **ಶ್ರೀ ಕೆ. ಜಕಣಾಚಾರಿ** ಬಿನ್ ಜಗದಪ್ಪ ಕೆ.
ಸೋಗಿ ಗ್ರಾ ಮತ್ತು ಅಂಚೆ, ಹೂವಿನಹಡಗಲಿ – 583219
ಬಳ್ಳಾರಿ , ಮೊ. 9916276696

6. **ಶ್ರೀ ಪವನ ಚಿದಾನಂದ ಪತ್ತಾರ**
ಮೈಗೂರ ರಸ್ತೆ, ಗಾಯಿತ್ರಿ ನಿವಾಸ, ಜಮಖಂಡಿ
ಬಾಗಲಕೋಟೆ, ಮೊ. : 9480598303

7. **ಶ್ರೀ ಸೂರಜ್ ನಾಯಕ್,** ಗುರುದೇವ ಮನೆ
ಮಾಳ ಗ್ರಾ ಮತ್ತು ಅಂಚೆ, ಕಾರ್ಕಳ ತಾ॥
ಉಡುಪಿ ಜಿಲ್ಲೆ, ಮೊ. 9964582626

8. **ಶ್ರೀ ಶ್ರೀ ಕಮ್ಮಾರ ಷಣ್ಮುಖಪ್ಪ,** ಬಿನ್ ಲೇ॥ ಮಾನಪ್ಪ ಕಮ್ಮಾರ
ಸೋಗಿ ಗ್ರಾಮ ಮತ್ತು ಅಂಚೆ, ಹೂವಿನಹಡಗಲಿ ತಾ॥
ಬಳ್ಳಾರಿ ಜಿಲ್ಲೆ – 583219, ಮೊ : 9986613948

9. **ಶ್ರೀ ನವೀನ್ ಕೆ. ಪೋತದಾರ್**
ಬಿನ್ ಕಾಳಪ್ಪ ಪೋತದಾರ್, ಗೌಡರ ಓಣಿ, ಪತ್ತಾರ ಗಲ್ಲಿ
ರೋಣ, ಗದಗ ಜಿಲ್ಲೆ, ಮೊ. 9535704801

10. **ಶ್ರೀ ಆರ್. ಮೌನಾಚಾರ್,** ಬಿನ್ ರಾಘವೇಂದ್ರಚಾರ್
ಹಾಲೇಕಲ್ಲು ಅಂಚೆ ಮತ್ತು ಗ್ರಾಮ, ಜಗಳೂರು ತಾ॥
ದಾವಣಗೆರೆ ಜಿಲ್ಲೆ, ಮೊ. 9902218101

11. **ಶ್ರೀ ಎಂ. ಎಸ್. ಗುರುಪ್ರಸಾದ್,** ನಂ. 366, 3ನೇ ಮೇನ್, 3ನೇ ಕ್ರಾಸ್, 4ನೇ ಹಂತ, ಬಿ.ಇ.ಎಂ.ಎಲ್. ಲೇಔಟ್ ಬೆಂಗಳೂರು, ಮೊ. : 9964637847

12. **ಶ್ರೀ ಮೌನೇಶ್ವರ ನಾಗಲಿಂಗ ಪತ್ತಾರ**
ನಂ. 1374, ಬಸವನಗಲ್ಲಿ, ಬೆಳಗಾವಿ, ಮೊ. 8538306775

13. **ಶ್ರೀ ಷಣ್ಮುಖಪ್ಪ ಬಿ. ಜೂಜ್‌ಗಾವ್**
ಕುಸನೂರು, ಹಾನಗಲ್ ತಾ॥ ಹಾವೇರಿ, ಮೊ. : 9945952607

14. **ಶ್ರೀ ಎ. ಮಂಜುನಾಥ** ಬಿನ್ ಸಂಗಪ್ಪ
ಮಾಲವಿ ಗ್ರಾ ಮತ್ತು ಅಂಚೆ, ಎಚ್. ಬಿ. ಹಳ್ಳಿ ತಾ॥
ಬಳ್ಳಾರಿ ಜಿಲ್ಲೆ, ಮೊ : 9902202443

15. **ಶ್ರೀ ವೀರಭದ್ರಾಚಾರ್. ಎಂ. ಆರ್**
ಬಿನ್ ಎಂ. ಪಿ. ರುದ್ರಾಚಾರ್, ನಂ. 18/6, ಹೊಸಳ್ಳಿ, ಗೊಲ್ಲರಪಾಳ್ಯ, ಎ.ಎನ್. ಅಂಚೆ, ಮಾಗಡಿ ಮುಖ್ಯರಸ್ತೆ, ಬೆಂಗಳೂರು
ಮೊ. : 9535252009, 9964464405

16. **ಶ್ರೀ ಜಿ. ಎನ್. ಸೋಮಾಚಾರಿ**
ಬಿನ್ ನಂಜುಂಡಾಚಾರಿ, 3ನೇ ಕ್ರಾಸ್, ಕಾರಂಜಿಕಟ್ಟೆ
ಕದಲಿಪುರ ರಸ್ತೆ, ಕೋಲಾರ ತಾ॥ ಜಿಲ್ಲೆ, ಮೊ. : 9008185893

17. **ಶ್ರೀ ಅಹಮದ್ ಐ. ಕನಸಾವಿ**
ಬನಶಂಕರಿ ನಾಟಕ ಮಂದಿರ ಹತ್ತಿರ, ಕುಲಕರಿ ಪೀಠ
ಇಳಕಲ್ – 587125, ಹುನಗುಂದ ತಾ॥ ಬಾಗಲಕೋಟೆ ಜಿಲ್ಲೆ

18. **ಶ್ರೀ ನಾಗೇಂದ್ರ ಕಾಳಪ್ಪ ಹೊಂಗಲ್**
ಕೇರಾಫ್ ಚಂದ್ರಕಾಳ ಚೇಗಲಾ, ಕೊನವಾಳ ಗಲ್ಲಿ, ಬೆಳಗಾವಿ
ಮೊ : 9535157021

19. **ಶ್ರೀ ಶಶಿಧರ ಕೆ. ಪತ್ತಾರ**
ನಂ. 1377, ರಾಮಲಿಂಗ ಖಿಂಡಿಹಳ್ಳಿ, ಬೆಳಗಾವಿ, ಮೊ. : 9886661486

